
ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ
1st Oct. '58
50
NAYE PAISE
8
AS

Photo by Anant Desai



ಬಹುಮಾನ
ಪಡೆದ ಶೀರ್ಷಿಕೆ

ತಗ್ಗಿ ಜಾರಿದರೆ ಭೂಮಾತೆ
ತಡವಿ ಕೊಟ್ಟಾಳು

ಕಳಿಸಿದವರು :
ಪಿ. ಶ್ರೀನಿವಾಸರಾವ್

# ಚಂದಮಾಮ



## ಈ ಸಂಚಿಕೆಯಲ್ಲಿ



ಇವುಗಳೆಲ್ಲಾ ತುಂಬಿವೆ.

---


**ಚಂದಮಾಮ** (ಹೊರಡುವ ಎಲ್ಲಾ ಭಾಷೆಗಳಲ್ಲಿಯೂ)

**ಬಿಡಿ ಪ್ರತಿ 50 ನಯೇ ಪೈಸೇ; ವಾರ್ಷಿಕ ಚಂದಾ ರೂ. 6-00**






ಪರಿಪೂರ್ಣವಾದ
ಮುಖವರ್ಚಸ್ಸಿಗೆ!

ನೇಷನಲ್‌ರವರ
**ಕಾಶ್ಮೀರ್ ಸ್ನೋ**

ದಿ ನೇಷನಲ್ ಟ್ರೇಡಿಂಗ್ ಕಂಪೆನಿ, ಬೊಂಬಾಯಿ-2 ★ ಮದರಾಸು-1

---

# ನಿಮಗೆ ಕೊಂಡು ಕೊಳ್ಳಲು ರಾಲೆಗಿಂತ ಉತ್ತಮ ವಾದುದು ಬೇರೆಇಲ್ಲ



# ರಾಲೆ



ಪ್ರಪಂಚದ ಅತಿ
ಪ್ರಸಿದ್ಧ
ಸೈಕಲ್







SRC-53 KN

## ಚಂದಾದಾರರಿಗೆ ವಿಜ್ಞಪ್ತಿ

ಮುಂದಿನ ತಿಂಗಳ ಚಂದಮಾಮ ಈ ತಿಂಗಳ ಕಡೇವಾರದಲ್ಲೇ ಪೋಸ್ಟು ಮಾಡಲ್ಪಡುತ್ತದೆ. ಸಕಾಲದಲ್ಲಿ ಪತ್ರಿಕೆ ಸೇರದಿದ್ದರೆ ಅವರವರ ಪೋಸ್ಟಾಫೀಸಿನಲ್ಲಿ ಫಿರ್ಯಾದಿಮಾಡಿ ಮುಂದಿನ ತಿಂಗಳು 10 ನೇ ತಾರೀಕಿನೊಳಗೆ ನಮಗೂ ತಿಳಿಸಬೇಕೆಂದು ಕೋರುತ್ತೇವೆ. ಅನಂತರ ಬರುವ ಕಂಪ್ಲೇಂಟು—ಕಳೆದ ತಿಂಗಳ ಪತ್ರಿಕೆ ಸೇರಲಿಲ್ಲವೆಂಬ ದೂರುಗಳನ್ನು ಗಮನಿಸಲಾಗುವುದಿಲ್ಲ.

★

## "ಚಂದಮಾಮ"ಕ್ಕೆ ಏಜಂಟರು ಬೇಕು

ಏಜಂಟರಿಲ್ಲದ ಕಡೆಗಳಲ್ಲಿ ಸಣ್ಣ ಸಣ್ಣ ಏಜಂಟರು ಬೇಕು. ನೀವು ಏಜಂಟರಾಗಿ ಸ್ವಲ್ಪ ಪ್ರತಿಗಳನ್ನು ಕೂಡಾ ತರಿಸಿಕೊಳ್ಳಬಹುದು. ಪ್ರತಿ ತಿಂಗಳೂ **3-0-0** ಕಳುಹಿಸುತ್ತಾ ಇದ್ದರೆ ನಿಮಗೆ **8** ಪ್ರತಿಗಳನ್ನು ಕಳುಹಿಸುತ್ತೇವೆ. ಈ ಪದ್ಧತಿಯಿಂದ ನಿಮಗೆ ಪ್ರತಿ ತಿಂಗಳೂ 1-0-0 ಲಾಭವಿರುತ್ತದೆ. ಪೂರ್ಣ ವಿವರಗಳಿಗೆ ಬರೆಯಿರಿ.

ಚಂದಮಾಮ
ಪಬ್ಲಿಕೇಷನ್ಸ್
ವಡಪಳನಿ, ಮದ್ರಾಸ್ - 26.



# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

ಮಾನವರಿಗೆ ಅಧಿಕಾರಕ್ಕಿಂತಲೂ ಶೀಲವೇ ಮುಖ್ಯವಾದುದು. ಸುಶೀಲರ ಮೇಲೆ ಜನತೆಯ ಹೃತ್ಪೂರ್ವಕವಾದ ಅಭಿಮಾನವೊಂದು ಪ್ರತ್ಯೇಕವಾಗಿರುವುದನ್ನು ಕಾಣಬಹುದು. ಏನೋ ಕರ್ಮಧರ್ಮ ಸಂಯೋಗದಿಂದ ಸುಶೀಲರಿಗೆ ವಿಪತ್ತು ಬಂದಾಗ, ಎಲ್ಲರೂ ಸಹಾನುತಾಪಿಗಳಾಗುವರೆಂಬುದಕ್ಕೆ ನಮ್ಮ ಪುರಾಣೇತಿಹಾಸಗಳಲ್ಲಿ ಅನೇಕ ಉದಾಹರಣೆಗಳಿವೆ. ಶ್ರೀರಾಮನು ವನವಾಸಕ್ಕೆ ಹೊರಟಾಗ ಪ್ರಜೆಗಳೆಲ್ಲಾ ಅವನನ್ನು ಹಿಂಬಾಲಿಸಲಿಲ್ಲವೆ? ಕಡೆಗೆ ಅವರ ಕಣ್ಣು ತಪ್ಪಿಸಿಯೇ ರಾಮನು ಹೊರಟುಹೋಗ ಬೇಕಾಯಿತು. ಹೀಗೆಯೇ ಪಾಂಡವರ ವಿಷಯದಲ್ಲಿಯೂ ನಡೆದಿದೆ. ಪ್ರಪಂಚವು ಸೌಶೀಲ್ಯತೆಯನ್ನೇ ಆದರಿಸುವುದಲ್ಲದೆ, ಪದವಿ, ಅಧಿಕಾರಗಳನ್ನಲ್ಲ.

ಈ ಬಗೆಯ ಪ್ರಪಂಚ ನ್ಯಾಯವನ್ನನುಸರಿಸಿರುವುದರಿಂದಲೇ ಷೇಕ್ಸ್‌ಪಿಯರ್ ಮಹಾಕವಿಯ ನಾಟಕಗಳೂ ಖ್ಯಾತಿಪಡೆದಿವೆ. ಈ ಸಂಚಿಕೆಯಲ್ಲಿ ಪ್ರಕಟವಾದ 'ಅರಣ್ಯವಾಸ' ಎಂಬ ಕಥೆ ಷೇಕ್ಸ್‌ಪಿಯರನ ಒಂದು ನಾಟಕವನ್ನನುಸರಿಸಿ ಬರೆದುದು. ಇದರಲ್ಲಿ ಮೇಲೆ ಹೇಳಿದ ಸತ್ಯಗಳು ಹೇಗೆ ಪ್ರಕಟವಾಗಿರುವುದೆಂಬುದನ್ನು ಕಾಣಬಹುದು. ಆ ಮಹಾ ಕವಿಯ ಕೃತಿಗಳನ್ನು ಕೂಡಾ ಕಥಾರೂಪದಲ್ಲಿ ಆಗಾಗ ಪ್ರಕಟಿಸಿ ನಿಮ್ಮನ್ನು ಮೆಚ್ಚಿಸಲು 'ಚಂದಮಾಮ' ನಿಶ್ಚಯಿಸಿರುತ್ತಾನೆ.

ಸಂಪುಟ ೨೧] ಅಕ್ಟೋಬರ್ ೧೯೫೮ [ಸಂಚಿಕೆ ೪



# ಮುಖಚಿತ್ರ

ಸಂಜಯನು ರಾಯಬಾರ ಮುಗಿಸಿ ಹೊರಟುಹೋದಮೇಲೆ ಧರ್ಮರಾಯನು ಕೃಷ್ಣನನ್ನು ಕುರಿತು, "ದೇವ, ನೀನೇ ನಮಗೀಗ ಕರ್ತವ್ಯ ತಿಳಿಸಬೇಕು. ಏನೂ ಕೊಡದೆಯೇ ಯುದ್ಧಮಾತ್ರ ಬೇಡವೆಂದು ಸಂಜಯ ಹೇಳುತ್ತಾನೆ. ಯುದ್ಧವೂ ರಕ್ತಪಾತವೂ ನನಗೂ ಇಷ್ಟವಿಲ್ಲ" ಎಂದನು. ಕೃಷ್ಣನೆಂದ: "ಬಿಕ್ಷೆ ಕೇಳುವುದು ಕ್ಷತ್ರಿಯ ಧರ್ಮವಲ್ಲ. ಆದರೂ ಧರ್ಮರಾಜಾ, ಈಗ ನಾನೇ ಹೋಗಿ ನಿಮಗೆ ರಾಜ್ಯಭಾಗ ಕೊಡಲು ಹೇಳುತ್ತೇನೆ. ಅದರಿಂದೇನೂ ಪ್ರಯೋಜನವಾಗಲಿಕ್ಕಿಲ್ಲ. ಆದರೆ ನಿಮ್ಮ ವಿಜಯವನ್ನೂ, ಧರ್ಮವನ್ನೂ ವಿವರಿಸಿ ದುರ್ಯೋಧನನ ಪಕ್ಷ ಹಿಡಿದವರ ಮನಸ್ಸನ್ನಿಷ್ಟು ಮಾರ್ಪಡಿಸಬಹುದು. ಇದರಿಂದ ನಿಮಗೆ ಪ್ರಯೋಜನವುಂಟು".

ಆಗ ಭೀಮನು, "ಕೃಷ್ಣ, ಯುದ್ಧದ ಮಾತೆತ್ತಿ ದುರ್ಯೋಧನನನ್ನು ಬೆದರಿಸಬೇಡ. ಸಾಧ್ಯವಾದಷ್ಟು ಒಳ್ಳೆತರಲ್ಲಿಯೇ ಕೆಲಸವಾಗುವಂತೆ ನೋಡು" ಎಂದ. ಭೀಮನ ಸೌಮ್ಯತೆಯನ್ನು ಕಂಡು ಕೃಷ್ಣನಿಗೇ ಆಶ್ಚರ್ಯವಾಯಿತು. ಭೀಮನ ಮರ್ಮಕ್ಕೆ ತಾಗುವಂತೆ ಕೃಷ್ಣನು ಹೇಳುತ್ತಲೇ "ಓಹೋ! ನಾನು ಹೆದರಿಕೊಂಡು ಸಂಧಿತೋರುವೆನೆಂದು ಭಾವಿಸ ಬೇಡ ಕೃಷ್ಣಾ! ಆ ಕೌರವಾಧಮರೆಲ್ಲರನ್ನೂ ನಾನು ಸೀಳಿಬಿಸುಡುವುದನ್ನು ನೀನೇ ನೋಡುವೆಯಂತೆ!" ಎಂದು ಆರ್ಭಟಿಸಿದನು ಭೀಮ.

ಅರ್ಜುನಕೂಡಾ ತಾನು ಧರ್ಮರಾಯನಹಾಗೇ ಅಭಿಪ್ರಾಯಪಡುವೆನೆಂದೂ, ಸಂಧಿ ಸಾಧ್ಯವಾಗದಿದ್ದರೆ ಕೃಷ್ಣನೇ ತನ್ನಿಚ್ಛೆಯಂತೆ ಮಾತಾಡಬೇಕೆಂದೂ ಹೇಳಿದನು. ನಕುಲಕೂಡಾ ಸೌಮ್ಯತೆಯನ್ನೇ ಇಚ್ಛಿಸಿದನು.

ಆದರೆ ಸಹದೇವನೋ, "ನನಗೆ ಧರ್ಮದ ಗೊಡವೆಬೇಡ. ಕೌರವರು ಶಾಂತಿಯನ್ನೇ ಕೋರಿದರೂ ನಾವು ಯುದ್ಧಮಾಡಿ ಅವರನ್ನು ನಾಶಮಾಡುತ್ತೇವೆಂತಲೇ ಹೇಳು ಕೃಷ್ಣಾ" ಎಂದ. ಸಹದೇವನಮಾತನ್ನೆ ಸಾತ್ಯಕಿ ಬಲಪಡಿಸಿದ. ಪಾಂಡವರ ಪಕ್ಷ ಹಿಡಿದುಬಂದ ರಾಜರೆಲ್ಲರೂ ಯುದ್ಧೋತ್ಸಾಹವನ್ನೇ ತೋರಿಸಿದರು.

ಕಡೆಗೆ ದ್ರೌಪದಿ ತನ್ನ ಕೂದಲನ್ನು ಹಿಡಿದುಕೊಂಡು ಕಣ್ಣೀರಿಳಿಸುತ್ತಾ ಕೃಷ್ಣನ ಬಳಿಗೆಬಂದು ತನ್ನ ಕಷ್ಟಗಳನ್ನು ಹೇಳಿಕೊಂಡು, "ನನಗಿಷ್ಟು ಅವಮಾನಮಾಡಿದ ಆ ದುರುಳರು ಇನ್ನೂ ಜೀವಿಸಿದ್ದಾರೆ. ಅವರು ಅಳಿದುಹೋಗುವಹಾಗೆ ನೋಡು!" ಎಂದು ಅತ್ತಳು. "ಅಳಬೇಡಮ್ಮ. ನಿನ್ನ ಶೋಕಕ್ಕೆ ಸಾವಿರಪಾಲು ಮಿಗಿಲಾಗಿ ಅವರ ಸ್ತ್ರೀಯರು ಅಳುವುದನ್ನು ನೀನೇ ನೋಡುವೆ! ನಂಬು ನನ್ನ ಮಾತು!" ಎಂದು ಕೃಷ್ಣನು ಅವಳನ್ನು ಸಮಜಾಯಿಸಿದನು.




ಘೂಕಮಂತ್ರಿ ರಕ್ತಾಕ್ಷನೆಂಬುದದು
ಪೇಳಿತಿಂತು : " ಈ ಮಂತ್ರಿಯನು
ಕೊಲ್ಲುವುದೇ ಸರಿ, ಕಥೆಯಿದೆ, ಕೇಳಿರಿ,
ಹಿಂದಿದ್ದನೋರ್ವ ಬ್ರಾಹ್ಮಣನು

ಹರಿದತ್ತೆಂಬಾ ಹಾರುವ ನಿತ್ಯಾ
ಮೈಮುರಿಯುತೆ ಬೇಸಾಯವನು
ಮಾಡಿದರೇನೂ ಲಾಭವಾಗದಿರೆ
ನೋಡಿ ನೋಡಿ, ಒಂದಿನವವನು ;

ದುಡಿದು ಬಳಲಿ ಮರವೊಂದರ ಕೆಳಗೆ
ಒರಗಿದ್ದನು ಚಿಂತಿಸುತವನು
ಪಕ್ಕದಲಿರುವಾ ಹುತ್ತದ ಒಳಗಡೆ
ಹಾವೊಂದಿಹುದನು ನೋಡಿದನು !

' ಈ ಬಯಲಿನ ಹಾವೇ ಇದು, ಖಂಡಿತ
ಪೂಜಿಸಲಿಲ್ಲವು ನಾನಿದನು.
ಅದಕೇ ಎನಗೇನೂ ಫಸಲಿಲ್ಲವು ;
ಪೂಜಿಸಬೇಕೀ ಉರಗವನು '

ಈಪರಿ ಎಣಿಸುತೆ ಮನೆಗೆ ಬಂದು, ಪಾಲ್
ತುಂಬಿದೊಂದು ಪಾತ್ರವನು
ತಂದು, ಹುತ್ತವನು ಪೂಜಿಸಿ ಪಾಲನು
ಅಲ್ಲಿರಿಸಿಯೆ, ಹಿಂದಿರುಗಿದನು.

ಮರುದಿನ ಬರಲಾ ಪಾತ್ರದ ಮಧ್ಯದಿ
ಸ್ವರ್ಣ ನಾಣ್ಯವೊಂದಿರುವುದನು
ಕಂಡು ಹಿಗ್ಗಿ, ಅದುಮೊದಲು ನಿತ್ಯವೂ
ಹುತ್ತಕೆ ಹಾಲನು ಇಡುತಿಹನು.

ದಿನವೂ ದೊರೆಯುವ ಸುವರ್ಣ ನಾಣ್ಯದ
ವಿನಿಮಯದಿಂದಾ ಬ್ರಾಹ್ಮಣನು
ಧನಿಕನಾಗುತಿರೆ, ಒಂದಿನವೇನೋ
ಕರೆದನು ತನ್ನಯ ಪುತ್ರನನು ;

' ಹುತ್ತಕೆ ಹಾಲನು ಸೇರಿಸಿ ಬಾರೆ 'ಂ
ದಾತನನಲ್ಲಿಗೆ ಅಟ್ಟಿದನು
ಹತ್ತದಿ ಹೇರಳ ನಿಧಿಯಿಹುದೆನುತವ
ನಗೆಯುತೆ ತಿವಿದನು ಹಾವನ್ನು !

---

ಮಾ ರಂ ಗ

---



ಹಾವು ಕಡಿಯಲವ ಬಿದ್ದನಲ್ಲಿಯೇ!
ತಂದೆ ಬಂದು ಬಲು ಅಳಲಿದನು.
ಹಾವ್ ಮಣಿಯೊಂದನು ಕೊಡುತಿನ್ನೀ ಕಡೆ
ಬರಬೇಡೆಂದಿತು ವಿಪ್ರನನು.

ಆದುದರಿಂ ತಡಮಾಡದೆಯೇ ನಾವ್
ಕೊಲ್ಲಲೆ ಬೇಕೀ ಕಾಗೆಯನು.''
ಒಡನೆಂದಿತು ಕ್ರೂರಾಕ್ಷಮಂತ್ರಿ: "ಓಯ್,
ತಡೆಯಿರಿ, ಕೊಲ್ಲಲು ಶರಣನನು.

ಶರಣಾಗತ ಅತಿಥಿಯ ಸಂರಕ್ಷಣೆ
ತರುವುದು ಉತ್ತಮ ಫಲಗಳನು.
ಪೇಳುವೆ ಕೇಳಿರಿ, ಹಿಂದಕ್ಕೆ ಇದ್ದನು
ಬೇಡನೋರ್ವ, ಒಂದಿನವವನು

ಪಾರಿವಾಳವೊಂದನು ಕೈಸಿಕ್ಕಿಸಿ
ಕ್ರಮಿಸಲು ಅಡವಿಯ ಮಾರ್ಗವನು,
ಭಾರೀ ಮಳೆ ಗಾಳಿಗೆ ಸಿಕ್ಕುತೆ ಕಡು
ನೆನೆದು ಚಳಿಗೆ ಬಲು ನಡುಗಿದನು.

ಹೆಮ್ಮರವೊಂದರ ಬುಡದಲಿ ನಿಂತನು.
ಪಾರಿವಾಳದಾ ಮರವದನು.
ಮರದಲ್ಲಿದ್ದ ಜತೆಹಕ್ಕಿಯು ಕರೆದೀ
ಬಂದಿಹಕ್ಕಿ ಪೇಳಿತು ಇದನು:

'ಸೆರೆಬಿದ್ದೆನು ನಾನೀತನ ಕೈಗೇ.
ನಮ್ಮನೆಗೇ ಇವ ಬಂದಿಹನು.
ಹಸಿದು ನಡುಗುವೀ ಅತಿಥಿಗೆ ತಕ್ಕುದ
ಬೇಗನೆ ಒದಗಿಸಿ ಕೊಡು ನೀನು'

ಇದನು ಕೇಳುತಲೆ ಮರದ ಕಪೋತವು
ಹಾರಿತು ತಿಳಿದೆಲ್ಲಾ ಹದನು.
ಒಣ ದರಲೆಗಳನು ತಂದೊಟ್ಟಿತು, ಮೇಣ್
ತಂದಿತು ಬೇಗನೆ ಬೆಂಕಿಯನು.

ದರಲೆಯುರಿದು ಬೇಡನ ಚಳಿಯಡಗಲು
'ಇನ್ನುಣ್ಣೆನ್ನನು ಬೇಯುವೆನು!'
ಎನ್ನುತ ಚಂಗನೆ ಪಾರಿವಾಳವದು
ಹೊಕ್ಕಿತಾ ಅಗ್ನಿ ಮಧ್ಯವನು!

ತನ್ನ ಜತೆಯ ಪಿಡಿದೆನ್ನೊಳು ಕುಪಿಸದೆ
ನಿಜಬಲಿಯಿತ್ತಾ ಹಕ್ಕಿಯನು
ಕಾಣುತೆ ಹೃದಯವು ಕರಗಲು ಬೇಡನು
ಕಂಬನಿ ತುಂಬಾ ಸುರಿಸಿದನು.

ಕೈಯ ಪಾರಿವಾಳವ ಮುದ್ದಾಡುತೆ
ತಡವಿಕೊಟ್ಟು ಸೆರೆ ಬಿಡಿಸಿದನು
ತನ್ನ ವೃತ್ತಿಯನೆ ಮಾಣಿಸಿಕೊಂಡನು
ಕಾಯಬೇಕಯ್ಯ ಶರಣರನು"

ಕೇಳೀ ಕಥೆಯನು ಅರಿಮರ್ದನ, ದೀ
ಪ್ತಾಕ್ಷ ಮಂತ್ರಿಯನು ನೋಡಿದನು.
ದೀಪ್ತಾಕ್ಷ ಮಂತ್ರಿಯೆಂದನು : "ನಾನೂ
ಕೊಲಕೂಡದೆಂದೆ ಪೇಳುವೆನು.

ಕೇಳ್ಳೆ ದೊರೆ, ಹಿಂದಿದ್ದನು ಓರ್ವನು
ವೈಶ್ಯ ವಾರ್ಧಕ್ಯ ಪೊಂದಿದನು
ತನ್ನಲಿದ್ದ ಧನವಿತ್ತು ಮೋಹದಿಂ
ಕನ್ಯೆಯೊಬ್ಬಳನು ವರಿಸಿದನು.

ಮುದುಕನನೊಲ್ಲದೆ ಮೂಸದೆ ಮುಟ್ಟದೆ
ದೂರವಿರುವ ಆ ಮಡದಿಯನು
ಒಲಿಸಲಾರದಾ ಮುದುಕನು ತವಿಸಲು
ಒಂದಿನ ಬಂದನು ತಸ್ಕರನು!

ರಾತ್ರಿವೇಳೆಯಲಿ ಕನ್ನವ ಕೊರೆದೇ
ಒಳಗೆ ನುಗ್ಗಿದನು ತಸ್ಕರನು.
ಕಳ್ಳನ ಕಾಣುತೆ ಹೆದರಿದ ಆ ಸತಿ
ಬಿಗಿದು ಅಪ್ಪಿದಳು ಗಂಡನನು!

ಎಂದೂ ಸೋಂಕದ ಸತಿಯಾಲಿಂಗನ
ದಿಂದಾನಂದದಿ ಪತಿಯವನು
ಕಾರಣವರಿಯಲು ಸುತ್ತೂ ಪರಿಕಿಸೆ,
ಕಂಡನು ಮೂಲೆಯ ಕಳ್ಳನನು!




'ಅರರೇ! ಕಳ್ಳಾ! ಓ ಪುಣ್ಯಾತ್ಮಾ!
ಎನಗೊಲಿಸಿದೆ ಈ ರಮಣಿಯನು!
ಸಂತೋಷಕೆ ಪ್ರತಿ, ಬೆದರದೆ ಕೊಂಡೊಯ್,
ನಿನ್ನ ಮನಕೆ ಬೇಕಾದುದನು!'

ಹೀಗಾ ಮುದುಕನು ಪೇಳಲು, ಕಳ್ಳನು
ನಾಚಿ ತಗ್ಗಿ ಮನಮೆಚ್ಚಿದನು.
'ಬೇಡ ಸ್ವಾಮಿ, ನೀವಂದುದೆ ಸಾಕೆ'ಂ
ದಂದು ಕೈಮುಗಿದು ಜಾರಿದನು!

ಈ ಕಥೆಯಂತೇ ನಮಗೆ ಶರಣಾಗಿ
ಬಂದು ಬಾಗಿದೀ ಕಾಗೆಯನು,
ಕಾಪಾಡಿದರೇನೋ ಉಪಕಾರವು
ಸಮನಿಸೀತು, ಯೋಚಿಸಿರಿದನು."



ಎತ್ತುಗಳಾಗಲು, ಅವುಗಳ ಕದಿಯಲು
ಹೋರಟನೋರ್ವ ಕಟುಕನು ಖಳನು!
ರಾತ್ರಿಯಲಾತನು ಹೊಂಚುತ ಬರುತಿರೆ,
ಸಿಕ್ಕಿದನೋರ್ವನು ರಾಕ್ಷಸನು.

ತಾನಾ ವಿಪ್ರನ ನುಂಗಲು ಪೋಗುವೆ
ಎಂದು ರಾಕ್ಷಸನು ಪೇಳಿದನು.
ತಾನಾ ವಿಪ್ರನ ಎತ್ತುಗಳನು ಕದಿ
ಯಲ್ಕೆ ಪೋಪೆನೆಂದನು ಖಳನು

ಹೀಗಾ ಈರ್ವರು ವಿಪ್ರನ ಮನೆಬಳಿ
ಬಂದು, ತೊಡಗಿದರು ವಾದವನು,
'ಮೊದಲು ಕದಿವೆ ನಾನೆತ್ತುಗಳನು' 'ತಡೆ,
ಮೊದಲು ತಿಂಬೆ ನಾನ್ ವಿಪ್ರನನು'

ಹೀಗೀರ್ವರಿಗೂ ವಾದ ಬಿರುಸಾಗೆ,
ನಿದ್ರೆ ಬಿಟ್ಟೆದ್ದು ಬ್ರಾಹ್ಮಣನು
ಹೊರಗೆ ಬರುತ್ತಲು, ರಾಕ್ಷಸನೆಂದನು;
'ನೋಡಿವ ಕದಿಯಲು ಬಂದಿಹನು!

'ನಿನ್ನನು ನುಂಗಲು ಈತನು ಬಂದನು!'
ಎನೆ ಕಟುಕನು, ತಿಳಿದಾ ಹದನು
ತತ್ಷಣ ಬ್ರಾಹ್ಮಣ ಮಂತ್ರದಿಂದೆ, ರಾ
ಕ್ಷಸೋಚ್ಚಾಟನೆಯ ಮಾಡಿದನು!

ದಂಡವ ತೋರಿಸಿ ಕಳ್ಳ ಕಟುಕನನು
ಬೆಂಗೆ ಕಾಲ್ಕೊಡಿಸಿ ಅಟ್ಟಿದನು!
ಆದರಿಂ ಹಗೆತೊಟ್ಟೀ ಕಾಗೆಯ ನಾವ್
ಕಾಯುವುದೇ ಮೇಲ್, ಎನ್ನುವೆನು"

ಮಂತ್ರಿ ವಕ್ರನಾಸವು ಮೇಣ್ ನುಡಿಯಿತು
"ನಿಜ, ನಾನೊರೆವೆನು ತೋರ್ಪುದನು.
ಯಾವ ರೀತಿ ಯೋಚನೆ ಮಾಡಿದರೂ
ವಧಿಸ ಬಾರದೀ ಕಾಗೆಯನು.

ವೈರಿಗಳೀರ್ವರ ಹೋರಾಟದಿ ನಾವ್
ಗಳಿಸಬಹುದು ಬಲು ಲಾಭವನು.
ಇದ್ದನು ಹಿಂದಕೆ ಬ್ರಾಹ್ಮಣನೋರ್ವನು;
ಬಲು ವಿದ್ವಾಂಸನು, ಸಜ್ಜನನು.

ಬಹಳ ಪ್ರೀತಿಯಿಂ ಸಾಕುತಲಿದ್ದನು
ಚೆಲುವೆರಡು ಹೋರಿ ಕರುಗಳನು.
ಅವನೇ ಮೇಯಿಸಿ, ಅವನೇ ಪೋಷಿಸಿ
ಬಹಳಕ್ಕರೆಯಲಿ ಬಳಿಸಿದನು.



# ಬ್ರಹ್ಮಪ್ರಳಯವು

ಬ್ರಹ್ಮದೇವನು ಭೂಮಿಯಲ್ಲಿ ಮಾನವರನ್ನು ಸೃಷ್ಟಿಸಿ "ಮಕ್ಕಳೇ, ಮತ್ತೆ ನಾನು ಪ್ರಳಯವನ್ನುಂಟುಮಾಡುವ ತನಕ ನೀವು ಈ ಭೂಮಿಯಲ್ಲಿ ಜೀವಿಸುತ್ತಿರಿ" ಎಂದು ವರವನ್ನಿತ್ತನು.

"ದೇವಾ, ಮತ್ತೆ ಪ್ರಳಯವೆಂದುಂಟಾಗುವುದೋ ನಮಗೆ ತಿಳಿದರೆ, ನಾವು ಮಾಡಬಹುದಾದ ಕರ್ತವ್ಯಗಳನ್ನು ನಿರ್ಣಯಿಸಿಕೊಳ್ಳುತ್ತೇವೆ" ಎಂದರು ಮಾನವರು.

"ಮುಂದಿನ ಪ್ರಳಯದಕಾಲ ನಿಮಗೆ ತಿಳಿಯಲು ನಾನೊಂದು ಏರ್ಪಾಟು ಮಾಡುತ್ತೇನೆ" ಎಂದು ಹೇಳಿ, ಬ್ರಹ್ಮದೇವನು ಮೂರು ಗೂಟಗಳನ್ನು ಒಂದುಕಡೆ ನೆಟ್ಟನು. ಮೊದಲನೇ ಗೂಟಕ್ಕೆ 64 ವರ್ತುಲಗಳನ್ನು ಜೋಡಿಸಿದನು. ತಳದಲ್ಲಿದ್ದ ವರ್ತುಲ ಎಲ್ಲಕ್ಕಿಂತಲೂ ದೊಡ್ಡದು, ಅದರಮೇಲಿನದು ತುಸ ಚಿಕ್ಕದು, ಅದಕ್ಕೂ ಮೇಲಿನದು ಇನ್ನಷ್ಟು ಚಿಕ್ಕದು, ಎಲ್ಲ ವಲಯಗಳಿಗೂ ಮೇಲಿದ್ದ ವಲಯ ಅತ್ಯಂತ ಚಿಕ್ಕದಾಗಿತ್ತು. ಆ ತರುವಾಯ ಬ್ರಹ್ಮದೇವನು ಮೂವರು ಮಾನವರನ್ನು ಕರೆದು "ನೀವು ಬ್ರಹ್ಮಪ್ರಳಯದ ವರೆಗೂ ಜೀವಿಸಿರುವಂತೆ ವರವನ್ನು ನೀಡುತ್ತೇನೆ. ನಿಮ್ಮ ಕೆಲಸವೇನೆಂದರೆ ಈ ವರ್ತುಲಗಳನ್ನೆಲ್ಲಾ ಇದೇ ಕ್ರಮದಲ್ಲಿ ಮೂರನೇ ಗೂಟಕ್ಕೆ ಬದಲಾಯಿಸಬೇಕು. ಅತ್ಯಂತ ದೊಡ್ಡ ವರ್ತುಲದಮೇಲೆ ಚಿಕ್ಕದಾದ ವಲಯವನ್ನು ಜೋಡಿಸಬಹುದೇ ಹೊರತು ಚಿಕ್ಕ ವಲಯದಮೇಲೆ ದೊಡ್ಡ ವಲಯವನ್ನು ಇಡಕೂಡದು. ಎರಡನೇ ಗೂಟ ತಾತ್ಕಾಲಿಕವಾಗಿ ವರ್ತುಲಗಳನ್ನು ಎತ್ತಿ ಇಡಲುಮಾತ್ರ ಉಪಯೋಗಿಸಬೇಕು. ನೀವು ಮೂವರು ಸರದಿಪ್ರಕಾರ ಈ ಕೆಲಸ ಸಾಧಿಸಿ ಈ ಅರವತ್ತುನಾಲ್ಕು ವಲಯಗಳೂ ಮೂರನೇ ಗೂಟಕ್ಕೆ ಇದೇ ಕ್ರಮದಲ್ಲಿ ಜೋಡಿಸಿದ ಕ್ಷಣವೇ ಪ್ರಳಯವಾಗುತ್ತದೆ" ಎಂದು ಹೇಳಿ ಬ್ರಹ್ಮದೇವನು ಅಂತರ್ಧಾನಹೊಂದಿದನು.

ಒಬ್ಬನು ದೇವನು ಹೇಳಿದಂತೆ ಕೆಲಸವನ್ನು ಆರಂಭಿಸಿದನು. ಅವನು ಎಲ್ಲಕ್ಕಿಂತಲೂ ಪುಟ್ಟದಾದ ಮೊದಲನೇಯ ವರ್ತುಲವನ್ನು ತೆಗೆದು

ಕೆ. ಕೆ. ರಾವ್

ಎರಡನೇ ಗೂಟಕ್ಕೆ ತಗುಲಿಸಿದನು. ಅದಕ್ಕಿಂತ ದೊಡ್ಡ ಎರಡನೇ ವಲಯವನ್ನು ಮೂರನೇ ಕೋಲಿಗೆ ತಗುಲಿಸಿ, ಅದರಮೇಲೆ ಮೊದಲನೇ ವರ್ತುಲವನ್ನು ಇಟ್ಟನು. ತರುವಾಯ ಮೂರನೇ ವರ್ತುಲವನ್ನು ಎರಡನೇ ಕೋಲಿಗೆ ತಗುಲಿಸಿ ಕೆಲಸ ಸಾಗಿಸಿದನು.

ಅದನ್ನು ನೋಡುತ್ತಿದ್ದವರಲ್ಲಿ ಒಬ್ಬನು "ಈ ಕೆಲಸ ಬಹಳಷ್ಟು ಸಮಯ ಹಿಡಿಯುವು ದಿಲ್ಲ. ಹೀಗಾದರೆ ಮಾನವರು ಭೂಮಿಯ ಮೇಲಿರುವ ಈ ಅಲ್ಪಕಾಲದಲ್ಲಿ ಏನುತಾನೇ ಸಾಧಿಸಬಲ್ಲರು?" ಎಂದನು.

ಮೂರನೇಯವನು ಮಾತನಾಡಲಿಲ್ಲ. ಕೊಂಚಹೊತ್ತಿಗೆಲ್ಲಾ ಐದಾರು ವಲಯಗಳು ಮೂರನೇ ಕೋಲನ್ನು ಸಾರಿತು. ತಾವು ಮೂವರೂ ವಿರಾಮವಿಲ್ಲದೆ ಕೆಲಸಮಾಡಿದರೆ ಈ ವಲಯಗಳನ್ನು ದಿನಕ್ಕೆ ಒಂದು ಲಕ್ಷಬಾರಿ ಅಲ್ಲಿಂದಿಲ್ಲಿಗೆ ಬದಲಾಯಿಸಬಹುದು ಎಂದು ಅಂದಾಜು ಹಾಕಿದನು. ಅಂತಹ ಬದಲಾವಣೆಗಳೆಷ್ಟುಬಾರಿಯಾಗಬೇಕೆಂದು ಅಂದಾಜು ಹಾಕಲೇ ಅವನಿಗೆ ಬಹಳಕಾಲ ಹಿಡಿಯಿತು.

ಅದರಿಂದ ಆ ವ್ಯಕ್ತಿ ಗಣಿತಶಾಸ್ತ್ರವನ್ನು ಸ್ವತಃ ಸೃಷ್ಟಿಸಬೇಕಾಯಿತು. ಗಣಿತ ಶಾಸ್ತ್ರದ ಸಹಾಯದಿಂದ ಈ ವಲಯಗಳನ್ನು 18, 446, 744, 073, 709, 554, 615 ಸಾರಿ ಬದಲಾಯಿಸಿದಹೊರತು ಅವು ಮೊದಲನೇ ಗೂಟದಿಂದ ಮೂರನೇ ಗೂಟವನ್ನು ಸೇರಲಾರದೆಂದು ನಿರ್ಣಯಿಸಿದನು.

ದಿನಕ್ಕೆ ಸುಮಾರು ಲಕ್ಷಸಾರಿಯಂತೆ ಇವುಗಳನ್ನೆಲ್ಲ ಪೂರ್ತಿಮಾಡಲು ಸುಮಾರು ಐವತ್ತು ಸಾವಿರ ಕೋಟಿ ವರ್ಷಗಳಾಗುವುದೆಂದು ಅರಿತನು. ಅವನು ತನ್ನ ಸಂಗಡಿಗರಿಗೆ "ಸಹೋದರರೇ, ಇನ್ನು ನಾವು ಈ ಕೆಲಸವನ್ನು ನಿಲ್ಲಿಸಬಹುದು. ಯಾಕೆಂದರೆ ಇನ್ನೂ ಐವತ್ತುಸಾವಿರ ಕೋಟಿ ವರ್ಷದ ತನಕ ಬ್ರಹ್ಮಪ್ರಳಯ ಬರಲಾರದು. ಅಷ್ಟರಲ್ಲಿ ಮಾನವರು ಅನೇಕ ಅದ್ಭುತಕಾರ್ಯಗಳನ್ನು ಸಾಧಿಸಬಹುದು" ಎಂದನು. ಅವನ ಲೆಕ್ಕಗಳನ್ನು ಉಳಿದವರಿಬ್ಬರೂ ಅರ್ಥಮಾಡಿಕೊಂಡು ಗಣಿತಶಾಸ್ತ್ರದಲ್ಲಿ ಪ್ರವೀಣರಾದರು, ಅನಂತರ ಉಳಿದೆಲ್ಲ ಶಾಸ್ತ್ರಗಳು ಬಂದುವು.






## 3

[ಸರ್ಪಕೇತನ ಅನುಚರರ ಕೈಯಲ್ಲಿ ತನ್ನ ಯಜಮಾನ ಸೂರ್ಯವರ್ಮನು ಮರಣ ಹೊಂದಿದುದನ್ನು ಕಂಡ ಸುಬಾಹುವೆಂಬ ಸೇವಕನು, ಈ ವಿಷಯವನ್ನು ಸೂರ್ಯವರ್ಮನ ಮಗ ಚಂದ್ರವರ್ಮನಿಗೆ ತಿಳಿಸಲು ಅಶ್ವವನ್ನೇರಿ ವೀರಪುರದ ಮಾರ್ಗವಾಗಿ ಹೊರಟನು. ದಾರಿಯಲ್ಲಿ ಅವನ ಕುದುರೆ ಸರ್ಪಕೇತನ ಭಟರಿಂದ ಮರಣಹೊಂದಿತು. ಕಾಲುನಡಿಗೆಯಿಂದ ಬೆಟ್ಟದಮೇಲಿಂದ ಇಳಿದ ಸುಬಾಹುವಿಗೆ ದೊಂದಿಗಳನ್ನು ಹಿಡಿದಿದ್ದ ಹಳ್ಳಿಗರು ಕಾಣಿಸಿದರು. ಅವರನ್ನು ಸಮೀಪಿಸುತ್ತಿರಲು ಕೆಲವರು ಅಶ್ವಾರೋಹಿಗಳು ಬಂದು ಅವನನ್ನು ಸುತ್ತುವರೆದರು. ತರುವಾಯ—]

ಸುಬಾಹು ಒಂದು ಕ್ಷಣಕಾಲ ನಿಶ್ಚೇಷ್ಟಿತನಾದನು. ತನ್ನ ಅವಸಾನಕಾಲವು ಸಮೀಪಿಸಿತೆಂದು ಅವನು ಹೆದರಿದನು. ತನ್ನ ಯಜಮಾನನ ಮರಣವಾರ್ತೆಯನ್ನು ಚಂದ್ರವರ್ಮನಿಗೆ ತಿಳಿಸಿದನಂತರ ಇಂತಹ ಪ್ರಮಾದ ಒದಗಿದ್ದರೆ ಅವನು ಚಿಂತಿಸುತ್ತಿರಲಿಲ್ಲ. ಈಗಿನ ಸನ್ನಿವೇಶದ ತನ್ನ ಸಾವು ವೀರಪುರ ಸಂಸ್ಥಾನಕ್ಕೆ ವಿಪರೀತ ವಿನಾಶಕರವಾಗಿ ಪರಿಣಮಿಸುವುದು. ತಾನೀಗ ಈ ರಾಹುತರನ್ನು ಮೋಸಗೊಳಿಸಿದರೆ ಎಷ್ಟು ಒಳ್ಳೆಯದಿತ್ತು!

“ಏಯ್, ಯಾರು ನೀನು? ಮಾತಾಡುವುದಿಲ್ಲವೇಕೆ?” ಎಂದು ಒಬ್ಬ ಸವಾರನು ಸುಬಾಹುವನ್ನು ಸಮೀಪಿಸಿ ಅವನ ಜುಟ್ಟು ಹಿಡಿದು ಅಲುಗಾಡಿಸಿದನು. ಅಷ್ಟರಲ್ಲಿ ಇನ್ನೊಬ್ಬನು “ಆ ಭಿಕ್ಷುಕನನ್ನು ಗೋಳಾಡಿಸಬೇಡಿ. ಉಪವಾಸದಿಂದ ಮಾತನಾಡಲೂ




ಸಹ ಶಕ್ತಿಯಿಲ್ಲ, ಪಾಪ" ಎಂದನು. ಅವನ ಮಾತು ಕೇಳಿ ಸುಬಾಹು ಚೇತರಿಸಿಕೊಂಡನು. ಮಿಂಚಿನಂತೆ ಅವನಿಗೊಂದು ಉಪಾಯ ಹೊಳೆಯಿತು. ತಾನೊಬ್ಬ ತಿರುಕನಂತೆ ನಟಿಸುವುದು ಸುಲಭವಾಗಿ ತೋರಿತು. ಕೊಂಚ ಧೈರ್ಯವೂ ಬಂದಿತು.

"ಒಂದಿಷ್ಟು ರೊಟ್ಟಿಚೂರು ಕೊಡಿ ಸ್ವಾಮಿ" ಎಂದು ಸುಬಾಹು ಸವಾರನಕಡೆ ದೈನ್ಯದಿಂದ ನೋಡಿ, ಕುದುರೆಯ ಕಾಲನ್ನು ಹಿಡಿದುಕೊಂಡನು.

"ಚೆ, ಇದೇನು ಅನಿಷ್ಟ. ವೀರಪುರದ ಗೂಢಚಾರನಿರಬಹುದೆಂದು ಭಾವಿಸಿದ್ದೆ" ಎಂದೆನ್ನುತ್ತಾ ಸವಾರನು ಕುದುರೆಯನ್ನು ಗದರಿಸಿ ಮುಂದಕ್ಕೆ ಓಡಿಸಿದನು.



"ಅಹ್ಹಹ್ಹಾ, ಇವನೆಂತಹ ಗೂಢಚಾರ! ಶರೀರದಲ್ಲಿ ಪ್ರಾಣವಿದ್ದಂತೆಯೇ ತೋರದು; ಈ ಹರಿದ ಅರಿವೆ... ಲೋ, ಶನಿಯೇ, ಶರೀರವನ್ನೇ ಹೊರಲಾರದ ಸ್ಥಿತಿಯಲ್ಲಿರುವಾಗ ನಿನಗೆ ಅಷ್ಟೊಂದು ಭಾರಿ ಕೋಲೇಕೋ?" ಎಂದ ಮತ್ತೊಬ್ಬ ಸವಾರ.

"ಬೆಟ್ಟಗಾಡಿನಲ್ಲಿ ಚಿರತೆ, ತೋಳಗಳು ವಿಶೇಷ. ಅವುಗಳನ್ನು ಗದರಿಸಿ, ಬೆದರಿಸಲು, ಸ್ವಾಮಿ" ಎಂದ ಸುಬಾಹು ಚಕ್ಕನೆ.

ಅವನ ಉತ್ತರ ಕೇಳಿ ಆ ಸವಾರನೊಂದಿಗೆ ಉಳಿದವರೂ ಸಹ ಹೊಟ್ಟೆ ಹುಣ್ಣಾಗುವಂತೆ ಬಿದ್ದ-ಬಿದ್ದು ನಕ್ಕರು.

"ಪ್ರಚಂಡ ಸಾಹಸಿಯಪ್ಪಾ, ನೀನು! ನಡೆಯಲೇ ಶಕ್ತಿಯಿಲ್ಲ. ಇನ್ನು ಚಿರತೆ, ತೋಳಗಳನ್ನು ಬೆದರಿಸುವೆಯಾ?" ಎಂದರು ಅವರು.

"ಒಂದಿಷ್ಟು ರೊಟ್ಟಿ ಚೂರು ಕೊಡಿ, ಸ್ವಾಮಿ, ಹಸಿದು ಸಾಯುತ್ತಿದ್ದೇನೆ. ತರುವಾಯ ನನ್ನ ಪ್ರತಾಪವನ್ನು ನೋಡುವಿರಂತೆ. ಒಂದು ವಾರದಿಂದ ಕೇವಲ ನೀರೇ ನನಗೆ ಆಹಾರವಾಗಿದೆ" ಎಂದ ಸುಬಾಹು.

ಸವಾರರು ಅವನ ಮಾತಿಗೆ ವಿಶೇಷ ಗಮನ ಕೊಡಲಿಲ್ಲ. ಅವರು ಕುದುರೆಗಳನ್ನು ಮುಂದಕ್ಕೆ ನುಗ್ಗಿಸಿ "ನೀವು ಬೇಗ ರಾಕಾಸಿ ದಿಬ್ಬವನ್ನು ಸೇರಿಕೊಳ್ಳಬೇಕು. ಅಲ್ಲಿ ನಿಮಗೆ ಬೇಕಾದ ಆಯುಧಗಳನ್ನು ಕೊಡಲಾಗುವುದು. ಬೆಳಗಾಗುವಷ್ಟರಲ್ಲಿ ವೀರಪುರ ನಮ್ಮ ಕೈವಶವಾಗುವುದು. ಸರ್ಪಕೇತ ಮಹಾರಾಜ



ರಿಗೆ ಜಯವಾಗಲಿ" ಎಂದು ಜಯಕಾರ ಮಾಡಿ ಬೇಗಬೇಗನೆ ಹೊರಟುಹೋದರು.

ಆಶ್ವಿಕರು ಹೊರಟುಹೋದ ಕೂಡಲೇ ಅಲ್ಲಿದ್ದ ಜನರಲ್ಲಿ ಕೆಲವರು ಸುಬಾಹುವಿನ ಬಳಿಗೆ ಬಂದರು. ಅವರಲ್ಲೊಬ್ಬನು ಅವನನ್ನು ಕುರಿತು "ಏನಪ್ಪಾ, ನೋಡಲು ಯುವಕನಂತೆ ಕಾಣುವೆ. ಕೈಕಾಲು ಗಟ್ಟಿಯಾಗಿವೆ. ಹೀಗೆ ಭಿಕ್ಷೆಬೇಡುವ ಕರ್ಮ ನಿನಗೇಕೆ ಬಂತು?" ಎಂದು ಕೇಳಿದನು.

"ಹೂಂ, ಅದರ ಮೂಲ ತಿಳಿದುಕೊಳ್ಳಲೇ ಈ ಬೆಟ್ಟದಮೇಲಿರುವ ಸ್ವಾಮಿಗಳಿಗೆ ಐದು ವರ್ಷಕಾಲ ಸೇವೆಸಲ್ಲಿಸಿದೆ, ಒಡೆಯ. ಅವರಿಗೇಕೋ ನನ್ನಮೇಲೆ ಕರುಣೆ ಬರಲಿಲ್ಲ. ಆದರೆ ನನ್ನ ಅದೃಷ್ಟ ನೆಟ್ಟಗಿತ್ತು. ಅವರಿಂದು ನನ್ನಮೇಲೆ ಪ್ರಸನ್ನರಾಗಿ ಬೆಟ್ಟದ ಮೇಲಿಂದ, ನಿಮ್ಮ ಕಡೆ ಬೊಟ್ಟುಮಾಡಿ, ನಾಳೆ ಬೆಳಗಾಗುವಷ್ಟರಲ್ಲಿ ನಿನ್ನನ್ನು ಇದುವರೆಗೆ ಕಾಡುತ್ತಿದ್ದ ಶನಿ ತೊಲಗಿಹೋಗುತ್ತದೆ. ಅಷ್ಟೇ ಅಲ್ಲ, ನಿನ್ನ ಸಂಗಡಿಗರ ಶನಿಸಹ ತೊಲಗುವುದು ಖಂಡಿತ. ಅದೋ, ಅಲ್ಲಿ ಕಾಣಿಸುತ್ತಿರುವ ಕಕ್ಕಡಗಳ ಬಳಿಗೆ ಹೋಗು ಎಂದು ಅಪ್ಪಣೆ ಕೊಡಿಸಿದರು. ನಾನು ತರಾತುರಿಯಿಂದ ಬೆಟ್ಟವಿಳಿದು ನಿಮ್ಮ ಬಳಿಗೆ ಬಂದೆ" ಎಂದ ಸುಬಾಹು.

ಸುಬಾಹುವಿತ್ತ ವಿವರಣೆ ಕೇಳಿ ಸುತ್ತಲೂ ನೆರೆದಿದ್ದ ಜನ ಒಂದುಕ್ಷಣ ದಿಗ್ಭ್ರಮರಾದರು. ವಿಸ್ಮಯದಿಂದ ಮೂಕರಾದರು. ಒಬ್ಬನು




"ಬಹಳ ದಿನಗಳಿಂದ ಆ ಬೆಟ್ಟದಮೇಲಿರುವ ಸ್ವಾಮಿಗಳ ವಿಷಯ ಕೇಳಿದ್ದೇನೆ. ಆದರೆ ಯಾರೂ ಅವರನ್ನು ಕಂಡಿಲ್ಲ. ಬೆಳಗಾಗುವಷ್ಟರಲ್ಲಿ ವೀರಪುರವನ್ನು ವಶಪಡಿಸಿಕೊಂಡು ಕೊಳ್ಳೆ ಹೊಡೆಯಲು ನಾವು ಹೊರಟಿದ್ದೇವೆ. ಸ್ವಾಮಿಗಳಿಗೆ ದಿವ್ಯದೃಷ್ಟಿಯಿರಬೇಕು. ಅಂತಲೇ ಅವರಿಗೆ ಈ ವಿಷಯ ತಿಳಿಯಿತು. ಇನ್ನು ನಮಗೆ ಜಯಸಿದ್ಧ. ಹೂಂ, ಎಲ್ಲರೂ ಬೇಗ ಹೊರಡಿ" ಎಂದ.

ಕೂಡಲೇ ಕೆಲವರು ಗ್ರಾಮಕ್ಕೆ ಹೋಗಿ, ಹಾಲು ರೊಟ್ಟಿಗಳನ್ನು ತಂದು ಸುಬಾಹುಗೆ ಕೊಟ್ಟರು. ಸುಬಾಹು ಅದನ್ನು ತಿಂದು ಮುಗಿಸಿದ ನಂತರ ಅವನ ಮುಂದೆ ಹೊಸ ಅರಿವೆಗಳನ್ನು ತಂದಿಟ್ಟರು. ಹರಿದಿದ್ದ ಅರಿವೆ





ಗಳನ್ನು ಕಳಚಿಹಾಕಿ, ಹೊಸ ಅಂಗಿಯನ್ನು ತೊಟ್ಟುಕೊಳ್ಳುವಂತೆ ಹೇಳಿದರು. ಹೊಸ ಅರಿವೆಗಳನ್ನು ಧರಿಸಿದರೆ ಅವರೆಲ್ಲಿ ತನ್ನ ಗುರುತುಹಿಡಿದು ಬಿಡುವರೋ ಎಂದು ಅನುಮಾನಗೊಂಡು ಸುಬಾಹು ಅವರತ್ತ ದೀನ ದೃಷ್ಟಿಯಿಂದ ನೋಡಿದನು. "ಮಿತ್ರರೇ, ನಾನು ನಿಮ್ಮ ದಯೆಗೆ ತುಂಬಾ ಕೃತಜ್ಞ ನಾಗಿದ್ದೇನೆ. ಆದರೆ ಈಗ ನಾನು ಹೊಸ ಅರಿವೆಗಳನ್ನು ಧರಿಸಿದರೆ ಗುರುಗಳ ಆಜ್ಞೆಯನ್ನು ಮೀರಿದಂತೆ ಆಗುವುದು. ನನ್ನನ್ನು ಕಾಡುತ್ತಿರುವ ಶನಿಮಹಾರಾಯನು ಸೂರ್ಯೋದಯದ ನಂತರ ತೊಲಗುವನು. ಆ ನಂತರ ಬೇಕಾದರೆ ಇವುಗಳನ್ನು ಧರಿಸುವೆನು" ಎಂದ ನುಡಿದ ಸುಬಾಹು.

ಕೂಡಲೇ ಎಲ್ಲರೂ "ಜೈ" ಎಂದು ಕಿವಿ ಕಿವುಡಾಗುವಂತೆ ಘೋಷಣೆಮಾಡಿದರು. ಅವನ ಮಾತಿನಮೇಲೆ ಅವರಿಗೆಲ್ಲಾ ನಂಬಿಗೆಯಾದಂತೆ ತೋರಿತು. ಒಬ್ಬನು "ಅದೆಲ್ಲ ಸರಿಯಪ್ಪಾ, ಆದರೆ ನಿನ್ನ ಹೆಸರೇ ಹೇಳಲಿಲ್ಲವಲ್ಲಾ" ಎಂದು ಕೇಳಿದನು.

"ಹೆಸರೇ...ಹೆಸರೇ..." ಎಂದು ಸುಬಾಹು ಕೊಂಚ ತಡಬಡಿಸಿ, ನಂತರ "ತಂದೆತಾಯಿಗಳಿಟ್ಟ ಹೆಸರು ಏನಾದರಾಗಲೊಲ್ಲದೇಕೆ? ಶನಿಯಕಾಟದಿಂದ ಇಷ್ಟುಕಾಲ ಪೀಡಿತನಾಗಿದ್ದೆ. ಗುರುವಾಜ್ಞೆಯಮೇರೆಗೆ ಅದು ತೊಲಗಿದ ತಕ್ಷಣ..." ಎಂದು ಹೇಳುತ್ತಿರುವಲ್ಲಿ ಅವರಲ್ಲೊಬ್ಬನು ನಡುವೆಯೇ ಬಾಯಿಹಾಕಿ "ಹೌದು ಹೌದು. ನಿನಗೆ

ಮಾತ್ರವಲ್ಲ, ಇಂದಿಗೆ ನಮ್ಮೆಲ್ಲರ ಶನಿಯೂ ತೊಲಗುವುದು. ಇಂದಿನಿಂದ ನಿನ್ನ ಹೆಸರು ಶನಿಮರ್ದನ" ಎಂದನು. ಕೂಡಲೇ ಎಲ್ಲರೂ ಅದನ್ನು ಅನುಮೋದಿಸಿದರು. "ಶನಿಮರ್ದನಿಗೆ ಜಯವಾಗಲಿ" ಎಂಬ ಕೂಗು ಮತ್ತೊಮ್ಮೆ ಗಗನವನ್ನು ಮುಟ್ಟಿತು.

ತರುವಾಯ ಎಲ್ಲರೂ ದೀವಟಿಗೆಗಳ ಬೆಳಕಿನಲ್ಲಿ ರಾಕಾಸಿ ದಿಬ್ಬದಬಳಿಗೆ ಹೊರಟರು. ತನ್ನ ಸಂಗಡವಿದ್ದ ಜನರ ಸಂಭಾಷಣೆಯನ್ನು ಕೇಳಿ ಅವರೆಲ್ಲರೂ ದೀನದಲಿತರೆಂದೂ, ಸರ್ಪಕೇತನು ಅವರಿಗೆ ದನಧಾನ್ಯಗಳ ಆಶೆ ತೋರಿಸಲು ಅವರು ವೀರಪುರದಕಡೆ ಹೊರಳಿರುವರೆಂತಲೂ ಸುಬಾಹು ತಿಳಿದುಕೊಂಡನು. "ವೀರಪುರದ ಸಾಮಂತ ಸೂರ್ಯವರ್ಮನು ಅಷ್ಟು ಕ್ರೂರನೋ?" ಎಂದು ಸುಬಾಹು ತನ್ನ ಪಕ್ಕದಲ್ಲಿದ್ದವನನ್ನು ಕೇಳಿದನು. ಅದಕ್ಕೆ ಅವನು ಗಹಗಹಿಸಿನಕ್ಕು "ಈ ಸಾಮಂತರಲ್ಲಿ ಯಾರು ಪ್ರಜಾಕಂಟಕನಲ್ಲ? ಸೂರ್ಯವರ್ಮನ ಸಂಗತಿ ನಾವೆರಿಯೆವು. ಆದರೆ ಸರ್ಪಕೇತನಂತಹ ಕ್ರೂರನಾದವನು ಬೇರೊಬ್ಬನಿರಲಾರ" ಎಂದ.

"ಹಾಗಾದರೆ ವೀರಪುರವನ್ನು ದೋಚಲು ನಾವು ಏಕೆ ಹೋಗಬೇಕು. ಹಾಗೆ ಮಾಡಿದರೆ ಸರ್ಪಕೇತನಿಗೆ ನಾವು ಸಹಾಯಮಾಡಿದಂತೆ ಆಗಲಿಕ್ಕಿಲ್ಲವೇ?" ಎಂದ ಸುಬಾಹು.

ಹೀಗೆ ಮಾತನಾಡುತ್ತಿರಲು ಮತ್ತಿಬ್ಬರು ಅವರೊಂದಿಗೆ ಬಂದು ಕೂಡಿಕೊಂಡರು. ಅವರು ಸುಬಾಹು ಹೇಳಿದ ಪ್ರಶ್ನೆಗೆ ನಕ್ಕು





"ಸರ್ಪಕೇತನಿಗೆ ಸಹಾಯಮಾಡಲು ನಾವು ಹೋಗುತ್ತಿಲ್ಲ. ವೀರಪುರವನ್ನು ಕೊಳ್ಳೆ ಹೊಡೆಯಲು ಅವನೇ ನಮಗೆ ಸಹಾಯಮಾಡುತ್ತಿರುವನು. ನಾವು ದೋಚಿಕೊಂಡ ಸಂಪತ್ತೆಲ್ಲಾ ನಮಗೇ ಸೇರುವುದು. ಅದರಲ್ಲಿ ಅವನಿಗೆ ಪಾಲು ಕೊಡಬೇಕಾಗಿಲ್ಲ" ಎಂದ.

ಮುಗ್ಧತೆ ಮತ್ತು ದುರಾಶೆಗಳ ಪ್ರತೀಕವಾದ ಈ ಹಳ್ಳಿಗರೊಂದಿಗೆ ಮಾತನಾಡಿ ಲಾಭವಿಲ್ಲವೆನಿಸಿತು. ತಮ್ಮನ್ನು ಪರಿಪಾಲಿಸುವ ಸಾಮಂತರೆಲ್ಲ ಅವರ ದೃಷ್ಟಿಯಲ್ಲಿ ಒಂದೇ! ಅವಕಾಶ ದೊರೆತಾಗ ಇತರರು ತಮ್ಮನ್ನು ದೋಚುವರು, ಅದೇ ರೀತಿ ಅವಕಾಶ ಸಿಕ್ಕಿದರೆ ತಾವೂ ಇತರರ ಸುಲಿಗೆಮಾಡಬೇಕು. ಇದು ಅವರ ವಾದವಾಗಿತ್ತು.



ಕೊಂಚ ಹೊತ್ತಾದನಂತರ ಎಲ್ಲರೂ ರಾಕಾಸಿ ದಿಬ್ಬವನ್ನು ಸೇರಿಕೊಂಡರು. ಆವೇಳೆಗಾಗಲೇ ಅಲ್ಲಿ ನೂರಾರುಮಂದಿ ಗುಂಪುಗೂಡಿದ್ದರು. ಅವರಲ್ಲಿ ಅನೇಕರು ದೀವಟಿಗಳನ್ನು ಹಿಡಿದುಕೊಂಡಿದ್ದರು. ಕೆಲವು ಸೈನಿಕರು ಅವರನ್ನು ಒಂದು ಕ್ರಮವಾಗಿ ನಿಲ್ಲಿಸುತ್ತಿದ್ದರು. ಸುಬಾಹು ಇದ್ದ ತಂಡವನ್ನೂ ಒಂದು ಕಡೆ ನಿಲ್ಲಿಸಲಾಯಿತು.

ಆ ತರುವಾಯ ದಳನಾಯಕರ ಉಡುಪಿನಲ್ಲಿದ್ದ ಕೆಲವು ಅಶ್ವಾರೋಹಿಗಳು ನೆರೆದಿದ್ದ ಜನರನ್ನು ಉದ್ದೇಶಿಸಿ ಹೀಗೆಂದರು :

"ಅಪಾರ ಶಕ್ತಿಸಂಪನ್ನನೂ, ದಯಾಮಯನೂ ಆದ ಸರ್ಪಕೇತ ಮಹಾರಾಜರ ಸಹಾಯದಿಂದ ಇಂದು ನೀವೆಲ್ಲ ಬಡತನದ ಬೇಗೆಯಿಂದ ಮುಕ್ತರಾಗುವಿರಿ. ನಾವು ವೀರಪುರವನ್ನು ಹೇಗೆ ಪ್ರವೇಶಿಸುವುದೆಂಬ ಸಮಸ್ಯೆ ನಮ್ಮಮುಂದಿದೆ. ವೀರಪುರದ ದ್ವಾರಪಾಲಕರನ್ನು ನಂಬಿಸಿ, ಮಹಾದ್ವಾರವನ್ನು ತೆರೆದು ಬಿಟ್ಟರೆ ಸಾಕು, ನಮ್ಮನ್ನು ಪಟ್ಟಣದಲ್ಲಿ ತಡೆ ಹಿಡಿಯಬಲ್ಲ ಶಕ್ತಿ ಯಾರಿಗೂ ಇರಲಾರದು. ಆದುದರಿಂದ ನಿಮ್ಮಲ್ಲಿ ಒಂದು ನೂರು ಜನ ಮೊದಲು ತಲೆಬಾಗಿಲನ್ನು ಸಮೀಪಿಸಿ, ಸರ್ಪಕೇತ ಮಹಾರಾಜನ ಸೈನಿಕರು ನಿಮ್ಮ ಗ್ರಾಮದಮೇಲೆ ಬಿದ್ದು ಧಾಳಿ ನಡೆಸುತ್ತಿರುವರೆಂದು ಕಿರುಚಿರಿ. ನಿಮ್ಮ ಗಲಭೆ ಕೇಳಿ ಕಾವಲುಗಾರರು ಬಾಗಿಲು ತೆಗೆಯುತ್ತಾರೆ. ಆಗ ನೀವೆಲ್ಲರೂ ಒಂದು ಪಕ್ಕಕ್ಕೆ ಸರಿದು ನಿಂತರೆ,





ನಾಗರೀಕರ ಪೋಷಾಕಿನಲ್ಲಿರುವ ನಮ್ಮ ಸೈನಿಕರು ಪಟ್ಟಣವನ್ನು ಪ್ರವೇಶಿಸುತ್ತಾರೆ. ಅವರ ಹಿಂದೆಯೇ ನೀವೂ ನುಗ್ಗಿ, ನಿಮ್ಮಿಷ್ಟ ಬಂದಂತೆ ನಗರವನ್ನು ಕೊಳ್ಳೆಹೊಡೆಯಬಹುದು. ಆದರೊಂದು ವಿಷಯ ಜ್ಞಾಪಕವಿರಲಿ. ಸಮಯ ಸಿಕ್ಕಿದಾಗಲೆಲ್ಲ ನೀವು 'ಯಶೋವರ್ಧನ ಮಹಾರಾಜರಿಗೆ ಜಯವಾಗಲಿ' ಎಂದು ಹೇಳುತ್ತಿರಬೇಕು. ಯಶೋವರ್ಧನ ಮಹಾರಾಜರೇ ನಿಮ್ಮನ್ನು ಕಳುಹಿಸಿರಬೇಕೆಂದು ಸೂರ್ಯವರ್ಮನ ಭಟರು ಭಾವಿಸಿ ನಮ್ಮ ಮೇಲೆ ಕೈಮಾಡಲಾರರು. ಹಾಗೆ ಮಾಡಿದವರನ್ನು ನಮ್ಮ ಸೈನಿಕರು ವಿಚಾರಿಸಿಕೊಳ್ಳುತ್ತಾರೆ, ಭಯಪಡಬೇಡಿ."

ಅವರು ಈ ರೀತಿ ಭರವಸೆ ನೀಡಿದಕೂಡಲೇ "ಯಶೋವರ್ಧನ ಮಹಾರಾಜರಿಗೆ ಜಯವಾಗಲಿ" ಎಂದು ಹಳ್ಳಿಗರು ಜಯಕಾರ ಮಾಡಿದರು. ವೀರಪುರವನ್ನು ಆಕ್ರಮಿಸಿಕೊಳ್ಳಲು ನಡೆಯುತ್ತಿರುವ ಪಿತೂರಿಯನ್ನು ಕಂಡು ಸುಬಾಹು ನಿರ್ವಿಣ್ಣನಾದನು. ತಾನು ಇವರೆಲ್ಲರಿಗಿಂತ ಮೊದಲು ವೀರಪುರವನ್ನು ಪ್ರವೇಶಿಸಿ ಚಂದ್ರವರ್ಮನಿಗೆ ನಿಜಾಂಶವನ್ನು ತಿಳಿಸಿದರೆ ಆತನು ನಗರವನ್ನು ಈ ಪ್ರಮಾದದಿಂದ ಕಾಪಾಡಲು ಸೂಕ್ತಕ್ರಮ ತೆಗೆದುಕೊಳ್ಳಬಹುದೆನಿಸಿತು. ಆದರೆ ಇವರೆಲ್ಲರ ಕಣ್ಣು ತಪ್ಪಿಸಿ ಹೋಗುವುದೆಂತು?

ಸುಬಾಹು ಹೀಗೆ ಆಲೋಚಿಸುತ್ತಿರಲು ಮಹಾಪೂರದಂತೆ ಹಳ್ಳಿಗರು ಮುಂದಕ್ಕೆ ನಡೆದರು. ಅವರಲ್ಲಿ ಅನೇಕರು ಸಾಧಾರಣ ಪೋಷಾಕಿನಲ್ಲಿದ್ದ ಸರ್ಪಕೇತನ ಸೈನಿಕರೆಂದು ಅವನು ಗ್ರಹಿಸಿದನು. ಎಲ್ಲರಿಗಿಂತಲೂ ಮುಂದೆ ಓಡುತ್ತಿದ್ದ ಹಳ್ಳಿಗರೊಂದಿಗೆ ಸುಬಾಹುಸಹ ಸೇರಿಕೊಂಡನು. ಶೀಘ್ರದಲ್ಲೇ ಅವರು ಪಟ್ಟಣದ ಮಹಾದ್ವಾರವನ್ನು ಸಮೀಪಿಸಿದರು. ಕೆಲವರು ಗೋಳಾಡುವ ಧ್ವನಿಯಲ್ಲಿ "ಅಯ್ಯಾ, ಬಾಗಿಲು ತೆರೆಯಿರಿ. ಸರ್ಪಕೇತನ ಸೈನಿಕರು ನಮ್ಮ ಗ್ರಾಮದ ಮೇಲೆ ಬಿದ್ದು ಲೂಟಿಹೊಡೆಯುತ್ತಿದ್ದಾರೆ. ಪ್ರಜೆಗಳನ್ನು ನಾನಾರೀತಿ ಹಿಂಸಿಸುತ್ತಿದ್ದಾರೆ. ನಮಗೆ ಸಹಾಯನೀಡಿ ಕಾಪಾಡಿರಿ" ಎಂದು ಕಿರಿಚಿಕೊಂಡರು. ಈ ಗಲಾಟೆಯನ್ನು ಕೇಳಿ ಹೆಬ್ಬಾಗಿಲಿನ ಹಿಂದೆ ನಿಂತಿದ್ದ ಕಾವಲು



ಗಾರರು ದ್ವಾರದ ಕದಗಳನ್ನು ತೆಗೆಯ ಬೇಕೇ ಬಿಡಬೇಕೇ ಎಂಬ ತೊಯ್ದಾಟದಲ್ಲಿ ರಲು ಜನರು ಮತ್ತೊಮ್ಮೆ ಹಾಹಾಕಾರ ಮಾಡಿದರು. "ಅಯ್ಯಾ, ನಮಗೆ ಸೂರ್ಯ ವರ್ಮ ಮಹಾರಾಜರೇ ದಿಕ್ಕು. ನಮ್ಮ ದೈನ್ಯಾವಸ್ಥೆಯನ್ನು ಅವರೊಂದಿಗೆ ಮುಖತಃ ಅರಿಕೆಮಾಡಿಕೊಳ್ಳಲು ಅವಕಾಶಕೊಡಿ" ಎಂದಿತು ಜನಸ್ತೋಮ.

ಕೂಡಲೇ ಹೆಬ್ಬಾಗಿಲು ತೆರೆಯಲಾಯಿತು. ಅದುವರೆಗೆ ಬಾಗಿಲ ಬಳಿಯಿದ್ದ ಜನ ಒಂದು ಪಕ್ಕಕ್ಕೆ ಸರಿದು ನಿಂತರು. ಮರುಕ್ಷಣವೇ ಅವರ ಹಿಂದಿನಿಂದ ಪೌರರ ಉಡುಪಿನಲ್ಲಿದ್ದ ಗುಪ್ತಸೈನಿಕರು ತಮ್ಮ ಆಯುಧಗಳನ್ನು ಹೊರಗೆ ತೆಗೆದು ಕಾವಲುಗಾರರ ಮೇಲೆಬಿದ್ದು ಅವರಲ್ಲಿ ಕೆಲವರನ್ನು ಕೊಂದರು. ಮತ್ತೆ ಕೆಲವರನ್ನು ಸೆರೆ ಹಿಡಿದರು.

ಸುಬಾಹು ಪಕ್ಕನೆ ಒಳನುಗ್ಗಿ ಕಾದಾಡುತ್ತಿದ್ದ ಕಾವಲುಗಾರರ ಪಕ್ಕದಿಂದ ಮುಂದಕ್ಕೆ ಓಡಿದನು. ಅದೇ ಸಮಯಕ್ಕೆ ಹಿಂದಿನಿಂದ ಯಾರೋ ಕಿರಿಚಿಕೊಂಡರು: "ಯಾರೋ ಅಲ್ಲಿ ಓಡುತ್ತಿದ್ದಾನೆ. ಏಯ್ ನಿಲ್ಲು. ಜನರೆಲ್ಲರೂ ಒಟ್ಟಾಗಿ ಹೊರಟಂತೆ ಕಾಣಬೇಕು. ಅವನನ್ನು ಹಿಡಿಯಿರಿ"

ಕೂಡಲೇ ಐದಾರು ಜನ ಸರ್ಪಕೇತನ ಸೈನಿಕರು "ನಿಲ್ಲು, ನಿಲ್ಲು" ಎಂದು ಸುಬಾಹುವನ್ನು ಹಿಂಬಾಲಿಸಿದರು. ತನ್ನ ಉಳಿವು ಅಳಿವುಗಳನ್ನು ನಿರ್ಧರಿಸಬೇಕಾದ ಸಮಯಸಮೀಪಿಸಿತೆಂದು ಸುಬಾಹು ನಿಶ್ಚಯಿಸಿ, ಚಂಗನೆ ಹಿಂದಕ್ಕೆ ತಿರುಗಿ ತನ್ನನ್ನು ಸಮೀಪಿಸುತ್ತಿದ್ದ ಸೈನಿಕನನ್ನು ಎದುರಿಸಿ ನಿಂತನು. ಸುಬಾಹು, ಅವನನ್ನು ಕಾಲಿನಿಂದ ಬಲವಾಗಿ ಒದೆಯಲು ಅವನು ಕೆಳಗೆ ಬಿದ್ದನು. ಕೂಡಲೇ ಅವನ ಕೈಯಿಂದ ಕತ್ತಿಯನ್ನು ಸುಬಾಹು ಕಸಿದುಕೊಂಡನು. ಇಷ್ಟರಲ್ಲಿ ಮತ್ತೊಬ್ಬ ಸೈನಿಕನು ಅವನನ್ನು ಸಮೀಪಿಸಿದನು. ಸುಬಾಹು ತನ್ನ ಖಡ್ಗದಿಂದ ಅವನನ್ನು ತಿವಿದುಕೊಂದನು. ಮತ್ತೆ ಕೆಲವು ಸೈನಿಕರು ಮುಂದೆ ಬರುವುದನ್ನು ಗಮನಿಸಿ ಸುಬಾಹು ಅರಮನೆಯ ಕಡೆ ಓಡಿದನು.

[ ಇನ್ನೂ ಇದೆ ]





# ಕೀಲುಕುದುರೆ

## 4

[ ಸಾಬೂರ್ ಸಾರ್ವಭೌಮನ ಮಗನಾದ ಅಕ್ಮಾರ್ ಮಾಯಾತುರಂಗದ ಸಹಾಯದಿಂದ ಸನಾನಗರವನ್ನು ಸೇರಿ ಅಲ್ಲಿನ ರಾಜಕುಮಾರಿಯನ್ನು ಕಂಡು ಪ್ರೇಮಿಸಿದನು. ಸನಾರಾಜನು ಅಪವಾದಕ್ಕೆ ಹೆದರಿ ಅಕ್ಮಾರ್ ಮತ್ತು ತನ್ನ ಮಗಳಿಗೆ ರಹಸ್ಯವಾಗಿ ವಿವಾಹ ಮಾಡಲು ನೆನೆಸಿದನು. ಇಂತಹ ಮದುವೆಗೆ ಇಷ್ಟವಿಲ್ಲದೆ ಅಕ್ಮಾರ್ ಯುಕ್ತಿಯಿಂದ ಸನಾನಗರದಿಂದ ತಪ್ಪಿಸಿಕೊಂಡು ಮನೆಗೆ ಹಿಂತಿರುಗಿ, ತನಗೆ ಕೀಲುಕುದುರೆಯನ್ನು ಕೊಟ್ಟ ಸಿದ್ಧನನ್ನು ಬಂಧನದಿಂದ ಬಿಡಿಸಿದನು. ತರುವಾಯ ಒಂದುವಾರದನಂತರ ಅವನು ಸನಾನಗರಕ್ಕೆ ತಿರುಗಿ ಹೋಗಿ ಯಾರಿಗೂ ತಿಳಿಯದಂತೆ ರಾಜಕುಮಾರಿಯನ್ನು ಭೇಟಿಮಾಡಿ, ಆಕೆಯೊಂದಿಗೆ ತನ್ನ ದೇಶಕ್ಕೆ ಬಂದನು. ಆಕೆಯನ್ನು ನಗರದ ಆಚೆಯಿದ್ದ ಉದ್ಯಾನದಲ್ಲಿರಿಸಿ ತಾನುಮಾತ್ರ ಅರಮನೆಗೆ ಹೋದನು. ರಾಜಕುಮಾರಿಯನ್ನು ಕರೆತರಲು ಮಂಗಳವಾದ್ಯಗಳೊಂದಿಗೆ ಚಕ್ರವರ್ತಿ ಹೊರಟನು. ಆದರೆ ಉದ್ಯಾನದಲ್ಲಿ ರಾಜಕುಮಾರಿ ಮಾಯವಾಗಿದ್ದಳು. ]

ಅಕ್ಮಾರನ ಎದೆ ಬಿರಿದಷ್ಟಾಯಿತು. ಅವನು ಹುಚ್ಚನಂತೆ ತನ್ನ ಪ್ರೇಯಸಿಯ ಹೆಸರು ಹಿಡಿದು ಕರೆಯುತ್ತಾ ಹುಚ್ಚನಂತೆ ಅತ್ತಿತ್ತ ಓಡಾಡ ತೊಡಗಿದನು.

ಹೀಗೆ ಈ ಹುಚ್ಚು ಆವೇಶ ಕಡಿಮೆಯಾಗಲು ನಿಧಾನವಾಗಿ ಯೋಚಿಸಲಾರಂಭಿಸಿದನು.

ರಾಜಕುಮಾರಿ ನಹರ್ ಕುದುರೆಯನ್ನೇರಿ ಎಲ್ಲಿಗಾದರೂ ಹೋಗಿರಬಹುದೇ? ಆದರೆ

ಸುನಂದಾದೇವಿ

ಆಕೆಗೆ ಕೀಲುಕುದುರೆಯ ರಹಸ್ಯ ತಿಳಿಯದು. ಆಕೆಗೆಂದೂ ಅವನು ಅದರ ವಿಷಯ ತಿಳಿಸಿರಲಿಲ್ಲ. ಆದುದರಿಂದ ಆಕೆ ಅಶ್ವವನ್ನೇರಿ ಹೊರಟಿಲ್ಲ. ಸಿದ್ಧನು ತನ್ನ ಮೇಲೆ ಸೇಡು ತೀರಿಸಿಕೊಳ್ಳಲು ಕುದುರೆ ಮತ್ತು ರಾಜಕುಮಾರಿಯನ್ನು ಅಪಹರಿಸಿಕೊಂಡು ಹೋಗಿರಬೇಕೆಂದು ಅವನಿಗನಿಸಿತು.

ಅವನಿಗೆ ಅನುಮಾನ ಬಂದಕೂಡಲೇ ಉದ್ಯಾನದ ಕಾವಲುಗಾರನನ್ನು ಕುರಿತು "ಈ ಉದ್ಯಾನಕ್ಕೆ ಯಾರಾದರೂ ಬಂದಿದ್ದರೇ? ನಿಜವನ್ನು ಹೇಳು" ಎಂದು ಗದರಿದ ಅಕ್ಮಾರ್.

ಕಾವಲುಗಾರನು ನಡುಗುತ್ತಾ "ಯಾರೂ ಹೊರಗಿನವರು ಬರಲಿಲ್ಲ ಸ್ವಾಮಿ. ಮೂಲಿಕೆಗಳು ಬೇಕೆಂದು ಒಬ್ಬ ಸಿದ್ಧನು ಬಂದನು. ಅವನು ಇಲ್ಲೇ ಎಲ್ಲೋ ಇರಬೇಕು" ಎಂದ.

ಅಕ್ಮಾರ್ ಊಹಿಸಿದಂತೆಯೇ ನಡೆದಿತ್ತು. ಉಕ್ಕಿಬರುತ್ತಿದ್ದ ದುಃಖವನ್ನು ಅದುಮಿ ಹಿಡಿದು ರಾಜಕುಮಾರನು ಉದ್ಯಾನದಕಡೆ ಬರುತ್ತಿದ್ದ ಮೆರವಣಿಗೆಯನ್ನು ಇದಿರುಗೊಂಡು ತನ್ನ ತಂದೆಗೆ ನಡೆದ ವಿಷಯವನ್ನು ತಿಳಿಸಿದನು.

"ಅಪ್ಪಾ, ಈ ಸೈನಿಕರನ್ನೆಲ್ಲಾ ಕರೆದುಕೊಂಡು ಅರಮನೆಗೆ ಹಿಂತಿರುಗು. ಆ ಮೋಸಗಾರನಿಗೆ ಬುದ್ಧಿ ಕಲಿಸುವತನಕ ನಾನು ಮನೆಗೆ ಬರುವುದಿಲ್ಲ" ಎಂದು ಅಕ್ಮಾರ್ ಹೇಳಿದ.

ಚಕ್ರವರ್ತಿ ಕಂಬನಿ ಮಿಡಿದನು. ತನ್ನ ಏಕಮಾತ್ರ ಪುತ್ರನು ಈ ವಿಧವಾಗಿ ಶಪಥ ಮಾಡಲು ಆತನಿಗೆ ಬಹಳ ಕಳವಳವಾಯಿತು. "ವೃಥಾ ಏಕೆ ಶ್ರಮಪಡುವೆ, ಮಗು.



ನಿನ್ನ ಕೋಪವನ್ನು, ದುಃಖವನ್ನು ನುಂಗಿಕೊಂಡು ಮನೆಗೆ ಹಿಂತಿರುಗು. ನೀನು ಇಚ್ಛಿಸಿದ ರಾಜಕುಮಾರಿಯನ್ನು ಆರಿಸಿ ತಂದು ನಿನಗೆ ವಿವಾಹಮಾಡುವೆನು. ನಹರ್‌ನನ್ನು ನೆನೆನೆನೆಸಿ ಚಿಂತಿಸಬೇಡ'' ಎಂದು ತಂದೆ ಸಮಾಧಾನ ಹೇಳಿದನು.

ಆದರೆ ಈ ಮಾತುಗಳು ಅಕ್ಮಾರನಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲ. ಅವನು ತರಾತುರಿಯಿಂದ ತನ್ನ ತಂದೆಗೆ ನಮಸ್ಕಾರ ಮಾಡಿ ತಾನು ಕುಳಿತಿದ್ದ ಕುದುರೆಯನ್ನು ವೇಗವಾಗಿ ಓಡಿಸಿಕೊಂಡು ಎತ್ತಲೋ ಹೊರಟುಹೋದನು. ಮಗನನ್ನು ಕಾಣದೆ ಚಕ್ರವರ್ತಿ ಕಣ್ಣೀರು ಸುರಿಸುತ್ತಾ ಅರಮನೆಗೆ ಹಿಂತಿರುಗಿದನು. ಅಂದು ಮುಂಜಾನೆ ಮೂಲಿಕೆ ಕಿತ್ತುಕೊಳ್ಳಲು ಪರ್ಷಿಯಾದೇಶದ ಸಿದ್ಧನು ಆ ಉದ್ಯಾನವನಕ್ಕೆ ಹೋದನು. ಆದರೆ ಒಳಗೆ ಪ್ರವೇಶಿಸಿದಕೂಡಲೇ ಕಸ್ತೂರಿ, ಪುನುಗು, ಜವ್ವಾಜಿ ಇತ್ಯಾದಿ ಪರಿಮಳ ವಸ್ತುಗಳ ಸುವಾಸನೆ ಮೂಗಿಗೆ ಬಡಿಯಿತು. ಸಿದ್ಧನು ಅಚ್ಚರಿಗೊಂಡು ಹಾಗೇ ಮುಂದೆ ನಡೆಯಲು ಅವನಿಗೊಂದು ಮಂಟಪ ಕಾಣಿಸಿತು. ಆ ಮಂಟಪದ ಮುಂದೆ ತನ್ನ ಕೀಲುಕುದುರೆಯಿತ್ತು! ಸಿದ್ಧನಿಗೆ ಹೊಸಜೀವ ಬಂದಂತಾಯಿತು. ಆ ಕುದುರೆಯನ್ನು ಕಳೆದುಕೊಂಡಂದಿನಿಂದ ಅವನ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಅವನು ನಿದ್ರೆಮಾಡುತ್ತಿರಲಿಲ್ಲ; ಆಹಾರ ಸೇವಿಸುತ್ತಿರಲಿಲ್ಲ. ಸದಾ ಕುದುರೆಯನ್ನು ಕುರಿತು ಚಿಂತಿಸುತ್ತಿದ್ದನು. ಅವನು ಲಗುಬಗನೆ ಕುದುರೆಯ






ಬಳಿ ಸಾರಿ ಅದನ್ನು ಪರೀಕ್ಷಿಸಿದನು. ಅದರ ಕೀಲುಗಳು ಸರಿಯಾಗಿದ್ದುವು. ಕೂಡಲೇ ಅದರ ಮೇಲೇರಿ ಹೊರಟುಹೋಗ ಬೇಕೆನಿಸಿತು. ಪಕ್ಕನೆ ಅವನಿಗೊಂದು ಯೋಚನೆ ಹೊಳೆಯಿತು. ರಾಜಕುಮಾರನು ಕುದುರೆಯ ಮೇಲೆ ಮತ್ತೆ ಯಾರನ್ನೋ ಕರೆದುಕೊಂಡು ಬಂದಿರಬೇಕೆಂದು ಅವನಿಗೆ ತೋರಿತು.

ಅಲ್ಲಿರುವ ವ್ಯಕ್ತಿಯನ್ನು ನೋಡುವ ಕುತೂಹಲವಾಯಿತು. ಸಿದ್ಧನು ಮಂಟಪವನ್ನು ಪ್ರವೇಶಿಸಿದನು. ಸೂರ್ಯನಂತೆ ದೇದೀಪ್ಯಮಾನವಾಗಿ ಬೆಳಗುತ್ತಾ ಹಾಸಿಗೆಯ ಮೇಲೆ ಮಲಗಿದ್ದ ರಾಜಕುಮಾರಿ ನಹರ್ ಕಾಣಿಸಿದಳು. ಆಕೆ ಸಾಮಾನ್ಯ ಸ್ತ್ರೀ ಯಲ್ಲವೆಂದೂ, ಯಾವುದೋ ದೇಶದ ರಾಜಕುಮಾರಿ ಇರಬೇಕೆಂದೂ ಅವನು ಗ್ರಹಿಸಿದನು. ಮಿಗಿಲಾದ ಆಡಂಬರದಿಂದ ಆಕೆಯನ್ನು ನಗರಕ್ಕೆ ಮೆರವಣಿಗೆಯಲ್ಲಿ ಕರೆದುಕೊಂಡು ಹೋಗುವ ಉದ್ದೇಶದಿಂದ ರಾಜಕುಮಾರನು ಆಕೆಯನ್ನು ಊರಾಚೆಯಿರುವ ಉದ್ಯಾನದಲ್ಲಿ ಇಳಿಸಿರಬೇಕೆನಿಸಿತು. ಅವನು ಮೆಲ್ಲನೆ ರಾಜಕುಮಾರಿಯನ್ನು ಸಮೀಪಿಸಿ ಸಲಾಮುಮಾಡಿದನು. ರಾಜಕುಮಾರಿ ನಿಧಾನವಾಗಿ ತಲೆ ಎತ್ತಿ ಸಿದ್ಧನನ್ನು ನೋಡಿದಳು. ಅವನ ವಿಕಾರ ಸ್ವರೂಪವನ್ನು ಕಂಡಕೂಡಲೇ ಅಸಹ್ಯದಿಂದ ಕಣ್ಣು ಮುಚ್ಚಿಕೊಂಡು "ಯಾರು ನೀನು?" ಎಂದು ಪ್ರಶ್ನಿಸಿದಳು.

"ಮಹಾರಾಣಿ, ನಾನು ರಾಜಕುಮಾರನ ಸೇವಕ. ನಮ್ಮ ಯಜಮಾನರು ತಮ್ಮನ್ನು ಬೇರೊಂದು ಮಂಟಪಕ್ಕೆ ಕರೆದುಕೊಂಡು ಹೋಗುವಂತೆ ಹೇಳಿರುವರು. ಆ ಮಂಟಪ ಇದಕಿಂತಲೂ ವಿಶಾಲವಾಗಿದೆ; ನಗರಕ್ಕೆ ಸಮೀಪದಲ್ಲಿದೆ. ವಾಸ್ತವಾಂಶವೇನೆಂದರೆ ಹಿರಿಯ ರಾಣಿಯವರ ದೇಹಸ್ಥಿತಿ ನೆಟ್ಟಗಿಲ್ಲ. ನಿಮ್ಮನ್ನು ಕರೆದೊಯ್ಯಲು ಅವರು ಇಷ್ಟು ದೂರ ಬರಲಾರರು" ಎಂದ ಸಿದ್ಧ.

"ಅದಿರಲಿ, ನಿಮ್ಮ ಯುವರಾಜರು ಎಲ್ಲಿದ್ದಾರೆ?" ಪ್ರಶ್ನಿಸಿದಳು ರಾಜಕುಮಾರಿ.

"ಅವರು ಸಾರ್ವಭೌಮರಸಂಗಡವಿದ್ದಾರೆ. ತಾಳಮೇಳ ಬಾಜಬಜಂತ್ರಿಗಳೊಂದಿಗೆ ಬಂದು, ತಮ್ಮನ್ನು ನಗರಕ್ಕೆ ಕರೆದುಕೊಂಡು ಹೋಗುತ್ತಾರೆ" ಸಿದ್ಧನು ಉತ್ತರವಿತ್ತನು.

“ಹೋಗಿ ಹೋಗಿ ನಿನ್ನಂತಹ ಕುರೂಪಿಯನ್ನು ಈ ಕೆಲಸಕ್ಕೆ ನೇಮಿಸಬೇಕೆ?'' ಎಂದಳು ರಾಜಕುಮಾರಿ ಬೇಸರದಿಂದ.

ಸಿದ್ಧನ ಕಪಾಳಕ್ಕೆ ರಪ್ಪನೆ ಹೊಡೆದಂತಾಯಿತು. ಆದರೆ ಅವನು ತನ್ನ ಅಳಲನ್ನು ಹೊರಗೆ ತೋರ್ಪಡಿಸದೆ, ಬಿಳಿಚಿಕೊಂಡ ಮುಖವೆಲ್ಲಾ ಸುಕ್ಕುಗೂಡುವಂತೆ ಗಟ್ಟಿಯಾಗಿ ನಗುತ್ತಾ “ನಿಮ್ಮ ಮಾತು ನಿಜ, ರಾಣಿ. ಆಸ್ಥಾನದಲ್ಲಿ ನನಗಿಂತಲೂ ಅಂದವಿಕಾರನಾದ ಮಾನವನಿಲ್ಲ. ಆದರೂ ಯುವರಾಜರಿಗೆ ನನ್ನ ಸಾಮರ್ಥ್ಯದಲ್ಲಿ ಬಲು ನಂಬಿಕೆ. ಶೀಘ್ರದಲ್ಲೇ ತಮಗೂ ತಿಳಿಯುವುದು. ಸುರೂಪರಾದ ನೌಕರರು ಅನೇಕರಿದ್ದರೂ ಅವರನ್ನು ಇಲ್ಲಿಗೆ ಕಳುಹಿಸದೆ, ಯುವರಾಜರು ಬೇಕೆಂದೇ ನನ್ನನ್ನು ಕಳುಹಿಸಿದ್ದಾರೆ. ಇದರಲ್ಲಿ ಏನೋ ವಿಶೇಷವಿರಬೇಕೆಂದು ಭಾವಿಸಬಾರದೇಕೆ?'' ಎಂದು ಕೇಳಿದನು.

ರಾಜಕುಮಾರಿಗೆ ಸಿದ್ಧನಲ್ಲಿ ತುಸನಂಬಿಕೆಯುಂಟಾಯಿತು. “ನನ್ನನ್ನು ಹೇಗೆ ಕರೆದುಕೊಂಡು ಹೋಗುವೆ?'' ಎಂದು ಕೇಳಿದಳು.

“ಇದೋ ಇಲ್ಲೆ ಇದೆ ಕುದುರೆ'' ಎಂದ ಸಿದ್ಧ ಕೈ ಉಜ್ಜಿಕೊಳ್ಳುತ್ತ.

“ನನಗೆ ಅದರ ಮೇಲೆ ಕುಳಿತು ಸವಾರಿ ಮಾಡಲು ಬರುವುದಿಲ್ಲ'' ಎಂದು ರಾಜಕುಮಾರಿ ತನ್ನ ಅಸಾಹಯಕತೆ ಸೂಚಿಸಿದಳು.

“ನನಗೆ ಗೊತ್ತು. ನನ್ನ ಹಿಂದೆ ಕುಳಿತುಕೊಳ್ಳಿ'' ಎಂದು ಸಿದ್ಧನು ಚಕ್ಕನೆ ಕುದುರೆಯನ್ನೇರಿ ಕುಳಿತನು. ರಾಜಕುಮಾರಿ ಅವನ ಹಿಂದೆ ಕುಳಿತುಕೊಂಡಳು. ಆಕೆಯನ್ನು ತನ್ನ ಸೊಂಟಕ್ಕೆ ಭದ್ರವಾಗಿ ಬಿಗಿದುಕಟ್ಟಿ, ಕುದುರೆ ಕದಲುವ ಮೀಟನ್ನು ಒತ್ತಿದನು. ಕುದುರೆ ಮೆಲ್ಲನೆ ಗಗನಕ್ಕೆ ಹಾರಿತು. ಕೆಲವಾರು ಕ್ಷಣದಲ್ಲಿ ಅದು ಬಹುದೂರ ಹೊರಟುಬಿಟ್ಟಿತು.



“ಎಲಾ, ನಿನ್ನ ಯಜಮಾನರು ಹೇಳಿದುದೇನು? ನೀನು ಮಾಡುತ್ತಿರುವುದೇನು?'' ಎಂದು ರಾಜಕುಮಾರಿ ಮುದುಕನನ್ನು ಗದರಿಸಿದಳು. “ನನ್ನ ಯಜಮಾನರು! ಅಹ್ಹ ಹ್ಹಾ. ಯಾರು ನನ್ನ ಯಜಮಾನರು?'' ಎಂದು ತುಂಟನಗೆ ಬೀರಿದ ಸಿದ್ಧ. “ಯುವರಾಜರು!'' ಎಂದಳು ಆ ಮುಗ್ಧೆ. “ಯಾವ ದೇಶದ ಯುವರಾಜ? ಓಹೋ, ನೀನು ರಾಜ

ಕುಮಾರ ಅಕ್ಮಾರನನ್ನು ಕುರಿತು ಪ್ರಸ್ತಾಪಿಸುತ್ತಿರುವೆಯಾ? ಬಿಡುಬಿಡು! ಅವನೊಬ್ಬ ಮೂಢ, ಶುದ್ಧ ಶುಂಠ" ಎಂದು ಸಿದ್ಧನು ಗಹಗಹಿಸಿ ನಕ್ಕನು.

"ನಿನ್ನ ಯಜಮಾನನನ್ನು ಹೀಗೆ ಹೀಯ್ಯಾಳಿಸುವುದು ತರವೇ?" ಕೇಳಿದಳು ರಾಜಕುಮಾರಿ. "ಅವನು ನನ್ನ ಯಜಮಾನನೇಕೆ ಆದಾನು? ನಾನು ಯಾರೋ ನಿನಗೆ ಗೊತ್ತಿದೆಯೇ?" ಪಕಪಕನೆ ನಕ್ಕನು ಸಿದ್ಧ.

"ನೀನು ಹೇಳಿದ ಮಾತುಹೊರತು ನನಗೇನೂ ತಿಳಿಯದು" ಎಂದಳು ರಾಜಕುಮಾರಿ.

"ನಾನು ಹೇಳಿದುದೆಲ್ಲಾ ಸುಳ್ಳು. ನಿನ್ನನ್ನು ಮತ್ತು ಆ ರಾಜಕುಮಾರನನ್ನು ಮೋಸಗೊಳಿಸಲು ಹೂಡಿದ ಆಟ, ಅಷ್ಟೇ. ನಾನು ಕಷ್ಟಪಟ್ಟು ತಯಾರಿಸಿದ ತುರಗವನ್ನು ಅವನು ಲಪಟಾಯಿಸಿ ನನಗೆ ತುಂಬಾ ತೊಂದರೆಕೊಟ್ಟಿದ್ದಾನೆ. ಇನ್ನುಮುಂದೆ ಅವನು ಅಳುತ್ತಾನೆ, ನಾನು ನಗುತ್ತೇನೆ. ನೀನು ಧೈರ್ಯದಿಂದಿರು. ಆ ಮೂದೇವಿಗಿಂತಲೂ ನಾನು ನಿನ್ನನ್ನು ಸಾವಿರಪಾಲು ಚೆನ್ನಾಗಿ ನೋಡಿಕೊಳ್ಳುತ್ತೇನೆ. ಸಾವಿರಾರು ದಾಸಿಯರು ನಿನ್ನ ಸೇವೆಮಾಡಲು ಸಿದ್ಧರಾಗಿರುತ್ತಾರೆ. ರಾಜಾಧಿರಾಜರಿಗೂ ಸಾಧ್ಯವಾಗದಂತಹ ವೈಭವ ನಿನಗೆ ಸಲ್ಲುವಂತೆ ಮಾಡುವೆನು" ಎಂದನು ಆ ಧೂರ್ತ ಸಿದ್ಧ.

ರಾಜಕುಮಾರಿ ಕೈಹಿಸುಕಿಕೊಂಡು "ಅಯ್ಯೋ ದೇವರೆ. ನನಗೆಂತಹ ಕಷ್ಟ ಪ್ರಾಪ್ತವಾಯಿತು. ತಂದೆತಾಯಿಗಳಿಗೆ ದೂರ



ವಾದೆ. ಈಗ ಪ್ರಿಯನಿಂದ ದೂರವಾಗಿದ್ದೇನೆ'' ಎಂದು ಶೋಕಿಸಲಾರಂಭಿಸಿದಳು.

ಸಿದ್ಧನು ಕುದುರೆಯನ್ನು ರೂಮ್‌ದೇಶಕ್ಕೆ ತೆಗೆದುಕೊಂಡು ಹೋಗಿ ಒಂದು ವಿಶಾಲವಾದ ಬಯಲಿನಲ್ಲಿ ಇಳಿಸಿದನು. ಅಲ್ಲಿ ಸುಂದರವಾದ ಝುರಿಯೊಂದು ಹರಿಯುತಿತ್ತು. ಬಯಲಿನ ಒಂದುಕಡೆ ಮಹಾ ನಗರವೊಂದು ಶೋಭಿಸುತಿತ್ತು. ಅದನ್ನು ಒಬ್ಬ ಸುಲ್ತಾನನು ಪಾಲಿಸುತ್ತಿದ್ದನು. ಮಾಯಾ ತುರಗ ಬಯಲಿನಲ್ಲಿ ಇಳಿದಂದೇ ಆ ದೇಶದ ಸುಲ್ತಾನನು ವಿಹಾರಾರ್ಥವಾಗಿ ಅಲ್ಲಿಗೆ ಬಂದಿದ್ದನು. ಸಿದ್ಧನು ಕುದುರೆಯಿಂದ ಇಳಿದ ಮರುಕ್ಷಣವೇ ಸುಲ್ತಾನನ ಭಟರು ಅವನನ್ನು ಸುತ್ತುಗಟ್ಟಿದರು. ಅವರು ಅವನನ್ನೂ, ರಾಜಕುಮಾರಿಯನ್ನೂ ಕೀಲುಕುದುರೆಯೊಂದಿಗೆ ಕರೆದುಕೊಂಡು ಹೋಗಿ ಸುಲ್ತಾನನಮುಂದೆ ನಿಲ್ಲಿಸಿದರು. ಸುಲ್ತಾನನು ಸಿದ್ಧ ಮತ್ತು ರಾಜಕುಮಾರಿಯನ್ನು ಕಂಡು ಚಕಿತನಾದನು. ಒಂದೇ ಕಣ್ಣಿನಲ್ಲಿ ವಿಶ್ವದಲ್ಲೆಲ್ಲಾ ಕುರೂಪಿಯಾದ ಪುರುಷನನ್ನೂ, ಸೌಂದರ್ಯರಾಶಿಯಾದ ಸ್ತ್ರೀಯನ್ನೂ ಕಂಡಂತೆ ಸುಲ್ತಾನನಿಗೆ ಭಾಸವಾಯಿತು.

"ಏನಮ್ಮಾ, ಕಾಗೆಯ ಮೂಗಿಗೆ ತೊಂಡೆಹಣ್ಣು ಕಟ್ಟಿದಂತೆ ನಿನ್ನನ್ನು ಈ ಮುದುಕನಿಗೆ ಹೇಗೆ ಗಂಟುಹಾಕಿದರು? ಹಗಲು ಇವನನ್ನು ಕಂಡರೆ ರಾತ್ರಿ ಕನಸಿನಲ್ಲಿ ಕಾಣಿಸುವಂತೆ ತೋರುವನು'' ಎಂದು ರಾಜಕುಮಾರಿಯನ್ನು ಸುಲ್ತಾನನು ಮಾತನಾಡಿಸಿದನು.





ಸಿದ್ಧನು ನಡುವೆ ಬಾಯಿಹಾಕಿ "ಈಕೆ ನನ್ನ ಸಮೀಪ ಬಂಧು. ನಮ್ಮಿಬ್ಬರಿಗೆ ವಿವಾಹ ವಾಗಿದೆ" ಎಂದನು.

"ಎಲ್ಲಾ ಸುಳ್ಳು, ಸುಳ್ಳಿನ ಕಂತೆ. ಈ ಮುದಿಗೂಬೆ ಯಾರೋ ನಾನರಿಯೆ. ಇವನು ಮಾಯಾವಿ. ನನ್ನನ್ನು ಮೋಸಗೊಳಿಸಿ, ಬಲಾತ್ಕಾರದಿಂದ ಇಲ್ಲಿಗೆ ಕರೆದುಕೊಂಡು ಬಂದಿದ್ದಾನೆ" ಎಂದಳು ರಾಜಕುಮಾರಿ, ಕಣ್ಣೀರು ಸುರಿಸುತ್ತಾ.

ಆಗ ಸುಲ್ತಾನನು ತನ್ನ ಭಟರಿಗೆ "ಯಾರಲ್ಲಿ? ಈ ಧೂರ್ತನಿಗೆ ನಾಲ್ಕು ಛಡಿ ಏಟು ಬಿಗಿಯಿರಿ. ವಂಚಕರಿಗೆ ಅದೇ ಶಿಕ್ಷೆ" ಎಂದನು. ಕೂಡಲೇ ಭಟರು ಸಿದ್ಧನಿಗೆ ನಾಲ್ಕು ಏಟು ಬಾರಿಸಿದರು.

ತರುವಾಯ ಸಿದ್ಧ, ರಾಜಕುಮಾರಿ ಮತ್ತು ಕೀಲುಕುದುರೆಯ ಸಮೇತ ಸುಲ್ತಾನನು ತನ್ನ ನಗರಕ್ಕೆ ಹೊರಟನು. ಸಿದ್ಧನನ್ನು ಸೆರೆಮನೆಗೆ ಕಳುಹಿಸಿ, ರಾಜಕುಮಾರಿ ಮತ್ತು ಕುದುರೆಯನ್ನು ಅರಮನೆಗೆ ಕರೆದುಕೊಂಡು ಹೋದನು. ಕೀಲುಕುದುರೆಯ ರಹಸ್ಯವೇನೂ ಸುಲ್ತಾನನಿಗೆ ತಿಳಿಯದು.

ಅತ್ತ ರಾಜಕುಮಾರ ಅಕ್ಮಾರ್ ತನ್ನ ಕುದುರೆಯೇರಿ, ರಾಜಕುಮಾರಿ ನಹರಳನ್ನು ಅರಸುತ್ತಾ, ಪ್ರತಿ ನಗರದಲ್ಲೂ ಅಲ್ಲಿನ ಪ್ರಜೆಗಳನ್ನು ಕುರಿತು "ನಿಮ್ಮ ನಗರದಲ್ಲಿ ಕೀಲುಕುದುರೆಯನ್ನು ಕಂಡಿರಾ?" ಎಂದು ಅದರ ಶಕ್ತಿಗಳನ್ನು ಬಣ್ಣಿಸಲಾರಂಭಿಸಿದನು.

ಯಾರೂ ಅವನ ಮಾತುಗಳಿಗೆ ಕಿವಿಕೊಡಲಿಲ್ಲ. ಅವನೊಬ್ಬ ಹುಚ್ಚನೆಂದು ಭಾವಿಸಿದರು.

ಈ ರೀತಿ ಅಕ್ಮಾರನು ಪ್ರಯಾಣಮಾಡಿ ಸನಾ ನಗರವನ್ನು ಸೇರಿಕೊಂಡನು. ಅಲ್ಲಿ ಯುವರನ್ನೂ ಹಾಗೆಯೇ ಪ್ರಶ್ನಿಸಿದನು. ಅವರು ರಾಜಕುಮಾರಿಯ ಸುಳಿವಾಗಲೀ, ಕೀಲುಕುದುರೆಯ ಸುಳಿವಾಗಲೀ ತಮಗೆ ತಿಳಿಯದೆಂದು ಹೇಳಿದರು. ರಾಜ ಮತ್ತು ರಾಣಿಸಹ ತಮ್ಮ ಮಗಳು ಕಾಣದಿರಲು ಒಂದೇಸವನೆ ಶೋಕಿಸುತ್ತಿರುವರೆಂದೂ ಹೇಳಿದರು.

ಅಲ್ಲಿ ನಿಂತು ಏನೂ ಪ್ರಯೋಜನವಿಲ್ಲವೆಂದು ಅಕ್ಮಾರನು ತನ್ನ ಪ್ರಯಾಣವನ್ನು ಮುಂದುವರಿಸಿ, ಕಾಲಕ್ರಮೇಣ ಮತ್ತೊಂದು ನಗರವನ್ನು ತಲುಪಿದನು. ಅವನು ತಂಗಿದ್ದ

ಸ್ಥಳದಲ್ಲೇ ಕೆಲವಾರು ವರ್ತಕರು ಬಂದಿಳಿದರು. ಊಟವಾದನಂತರ ಅವರೆಲ್ಲ ಒಂದು ಕಡೆ ಸೇರಿ ಮಾತನಾಡುತ್ತಿದ್ದರು. ಆಗ ಒಬ್ಬನು "ಅಯ್ಯಾ, ಈಮಧ್ಯೆ ನಾನು ರೂಮ್ ನಗರಕ್ಕೆ ಹೋಗಿದ್ದೆ. ಅಲ್ಲೊಂದು ವಿಚಿತ್ರ ನಡೆಯಿತು. ಒಂದು ದಿನ ಸುಲ್ತಾನರು ವಿಹಾರಕ್ಕೆ ಹೊರಟಾಗ ಅವರಿಗೆ ಕುರೂಪಿಯಾದ ಮುದುಕನೊಬ್ಬನೂ, ಸುರೂಪಿಯಾದ ತರುಣಿಯೊಬ್ಬಳೂ ಕಾಣಿಸಿದರಂತೆ. ಅದಕ್ಕಿಂತಲೂ ವಿಚಿತ್ರವೇನೆಂದರೆ ಒಂದು ಗಂಧದಮರದ ಅಶ್ವ ಅವರಬಳಿಯಿತ್ತಂತೆ" ಎಂದು ಹೇಳುತ್ತಿದ್ದ.

ಅಕ್ಮಾರನಿಗೆ ತಾನು ಹುಡುಕುತ್ತಿದ್ದ ಬಳ್ಳಿ ಕಾಲಿಗೆ ಸಿಕ್ಕಿಕೊಂಡಂತಾಯಿತು. ಮೆಲ್ಲನೆ ಅವನಬಳಿ ಸರಿದು ರೂಮ್ ನಗರದ ವಿವರಗಳನ್ನೆಲ್ಲಾ ಕೇಳಿ ತಿಳಿದುಕೊಂಡು ನೆಟ್ಟಗೆ ಅಲ್ಲಿಗೆ ಪ್ರಯಾಣಬೆಳೆಸಿದನು.

ಅವನು ನಗರವನ್ನು ಪ್ರವೇಶಿಸಿದಕೂಡಲೇ ದ್ವಾರಪಾಲಕರು ಅವನನ್ನು ಹಿಡಿದು ನಿಲ್ಲಿಸಿದರು. ನಗರಕ್ಕೆ ಬರುವ ಪರದೇಶದವರನ್ನು ಸುಲ್ತಾನನು ಮುಖತಃ ನೋಡಿ ಪ್ರಶ್ನಿಸುವುದು ಅಲ್ಲಿನ ನಿತ್ಯಪದ್ಧತಿಯಾಗಿತ್ತು. ಆದರೆ ಅಂದು ಹೊತ್ತುಮೀರಿದ್ದರಿಂದ ಸುಲ್ತಾನನ ದರ್ಶನ ಮಾರನೇಯ ದಿನದವರೆಗೆ ಆಗುವಂತಿರಲಿಲ್ಲ. ಆದುದರಿಂದ ಅವರು ಅಕ್ಮಾರನನ್ನು ಸೆರೆಮನೆಗೆ ಕರೆದುಕೊಂಡು ಹೋದರು.

ಆದರೆ ಯಾವ ಅಪರಾಧವನ್ನೂ ಎಸಗದ ಯುವಕನನ್ನು ಬೆಳಗಾಗುವತನಕ ಸೆರೆಮನೆಯಲ್ಲಿರಿಸುವುದು ಅನುಚಿತವೆನಿಸಿತು. ಅವರು



ಅವನನ್ನು ತಮ್ಮೊಂದಿಗೆ ಊಟಕ್ಕೆ ಕುಳಿತುಕೊಳ್ಳುವಂತೆ ಆಹ್ವಾನಿಸಿದರು. ಊಟವಾದ ನಂತರ ಅವರೆಲ್ಲ ಹರಟೆಹೊಡೆಯಲು ಮೊದಲು ಮಾಡಿದರು. ಆಗ ಒಬ್ಬನು ರಾಜಕುಮಾರನ ಕಡೆ ತಿರುಗಿ "ನಿಮ್ಮ ದೇಶ ಯಾವುದು ತಮ್ಮಾ?" ಎಂದು ಕೇಳಿದನು.

"ನನ್ನದು ಪರ್ಷಿಯಾದೇಶ" ಎಂದನು.

ಆ ಮಾತು ಕೇಳಿ ಅಲ್ಲಿದ್ದವರೆಲ್ಲ ಗೊಳ್ಳನೆ ನಕ್ಕರು. ಆ ರೀತಿ ನಗಲು ಕಾರಣವೇನೆಂದು ಅಕ್ಮಾರನು ಕೇಳಲು "ಕೆಲವು ದಿನಗಳಹಿಂದೆ ನಿಮ್ಮ ದೇಶದವನೊಬ್ಬನು ಇಲ್ಲಿಗೆ ಬಂದನು. ಅವನನ್ನು ಕಂಡರೆ ಕಾರಿರುಳು ಜ್ಞಾಪಕಕ್ಕೆ ಬರುತ್ತದೆ. ಅಬ್ಬ, ಏನು ಬಡಾಯಿಹೊಡೆಯುತ್ತಾನೆ ಗೊತ್ತೇ? ಅಷ್ಟು ಗಪ್ಪಿಹೊಡೆಯುವನನ್ನು ನಾನು ಎಂದೂ ನೋಡಿಲ್ಲ. ನೀನೂ ಅಂತಹ ಮನುಷ್ಯನಲ್ಲವಷ್ಟೇ? ಅವನೆಷ್ಟು ಅಸಹ್ಯವಾಗಿದ್ದಾನೆ ಬಲ್ಲೆಯಾ?" ಎಂದನೊಬ್ಬ. "ಅವನು ಏನು ಹೇಳಿದ?" ಅಕ್ಮಾರ್ ಕೇಳಿದ.

"ಒಂದೇನು, ಎರಡೇನು? ಅವನೊಬ್ಬ ಸಿದ್ಧನಂತೆ. ವೈದ್ಯಕೀಯದಲ್ಲಿ ಪ್ರಚಂಡನಂತೆ! ನಮ್ಮ ಸುಲ್ತಾನರು ಒಂದುದಿನ ವಿಹಾರಕ್ಕೆ ಹೋದಾಗ ಅವರಿಗೆ ದಾರಿಯಲ್ಲಿ ಈ ಮುದುಕ, ಅಪ್ಸರೆಯಂಥ ಯುವತಿಯೊಬ್ಬಳು ಕಾಣಿಸಿದರಂತೆ. ಇವಳೊಂದಿಗೆ ಒಂದು ಮರದ ಕುದುರೆಯೂ ಇತ್ತಂತೆ. ಆ ಯುವತಿಯ ಅಂದವನ್ನು ಬಣ್ಣಿಸಲು ನಾವು ಸಮರ್ಥರಲ್ಲ. ನಮ್ಮ ಸುಲ್ತಾನರು ಆಕೆಯನ್ನು ವಿವಾಹ



ವಾಗಬೇಕೆಂದಿದ್ದರು. ಆದರೆ ಅಷ್ಟರಲ್ಲಿ ಆಕೆಗೆ ಹುಚ್ಚು ಹಿಡಿಯಿತು. ಮುದುಕನು ನಿಜವಾಗಿ ವೈದ್ಯನೇ ಆಗಿದ್ದರೆ ಆಕೆಯ ಹುಚ್ಚನ್ನೇಕೆ ಗುಣಪಡಿಸಬಾರದು. ಇದು ಅವನಿಂದ ಸಾಧ್ಯವೇ? ಸುಲ್ತಾನರು ಮಹಾ ಮಹಾ ಪಂಡಿತರಿಂದ ಆಕೆಗೆ ಚಿಕಿತ್ಸೆಮಾಡಿಸಿದರು. ಹಣ ನೀರಿನಂತೆ ಖರ್ಚುಮಾಡಿದರು. ಆದರೆ ಆಕೆಯ ಹುಚ್ಚು ವಾಸಿಯಾಗುವಂತೆ ತೋರದು, ಪಾಪ" ಎಂದ.

ಇದುವರೆಗೆ ಎಲ್ಲವೂ ಸುಗುಮವಾಗಿ ಸಾಗಿದೆ ಎಂದೆನಿಸಿತು ರಾಜಕುಮಾರನಿಗೆ. 'ಮುಂದಿನ ಕರ್ತವ್ಯವೇನು' ಎಂದು ಅಕ್ಮಾರ್ ಯೋಚಿಸುತ್ತಿದ್ದನು.

ಮಲಗಿಕೊಳ್ಳುವ ವೇಳೆಯಾಗಲು ಕಾವಲುಗಾರರು ರಾಜಕುಮಾರನನ್ನು ಸೆರೆಮನೆಯ ಒಂದು ಕೋಣೆಯಲ್ಲಿಟ್ಟು, ಬೀಗಹಾಕಿ, ತಮ್ಮ ಪಾಡಿಗೆ ತಾವು ಮಲಗಿಕೊಳ್ಳಲು ಹೊರಟರು.

ಅಕ್ಮಾರನಿಗೆ ನಿದ್ರೆ ಬರಲಿಲ್ಲ. ಕತ್ತಲೆ ಕೋಣೆಯಲ್ಲಿ ಬಂಧಿತನಾಗಿದ್ದ ಸಿದ್ಧನು ನರಳುತ್ತಾ ತನ್ನ ಮಾತೃಭಾಷೆಯಾದ ಪಾರ್ಸಿ ಭಾಷೆಯಲ್ಲಿ ತನ್ನಷ್ಟಕ್ಕೆ ತಾನೇ ಗಟ್ಟಿಯಾಗಿ ಮಾತನಾಡಿಕೊಳ್ಳುತ್ತಿದ್ದನು.

"ಎಂಥ ನತದೃಷ್ಟ ನಾನು. ಹೂಡಿದ ಹಂಚಿಕೆಯೊಂದೂ ಫಲಿಸದಾಯಿತು. ಕೈಗೆ ಸಿಕ್ಕಿದ ಹಕ್ಕಿ ದಕ್ಕಲಿಲ್ಲ" ಎಂದು ಏನೇನೋ ಒದರುತ್ತಿದ್ದನು.

ಆಗ ಅಕ್ಮಾರ್ ಸಿದ್ಧನನ್ನು ಕುರಿತು "ಅದೃಷ್ಟಹೀನನು ನೀನುಮಾತ್ರವಲ್ಲ. ನಿನ್ನಂತೆ ಅನೇಕರಿದ್ದಾರೆ. ಅಯ್ಯಾ! ನಿನ್ನ ಗೋಳಾಟಕ್ಕೆ ಕಾರಣವೇನು?" ಎಂದು ಪಾರ್ಸಿ ಭಾಷೆಯಲ್ಲಿಯೇ ಕೇಳಿದನು.

ಸಿದ್ಧನಿಗೆ ಜೀವಬಂದಂತಾಯಿತು. ತನ್ನನ್ನು ಪ್ರಶ್ನಿಸಿದಾತನು ರಾಜಕುಮಾರ ಅಕ್ಮಾರ್ ಎಂದು ಅವನಿಗೆ ತಿಳಿಯದು. ಅಂತಲೇ ತಾನು ರಾಜಕುಮಾರಿಯನ್ನು ಅಪಹರಿಸಲು ಪಟ್ಟ ಬವಣೆ, ಅದು ವಿಫಲವಾದ ವಿಷಯವನ್ನು ಮಣಿಪೋಣಿಸಿದಂತೆ ಹೇಳಿಬಿಟ್ಟನು. ಬೆಳಗಾಗುವ ತನಕ ಅವರಿಬ್ಬರೂ ಆಪ್ತಮಿತ್ರರಂತೆ ಸಂಭಾಷಣೆ ನಡೆಸುತ್ತಿದ್ದರು.

[ಮುಂದಿನ ಸಂಚಿಕೆಯಲ್ಲಿ ಮುಕ್ತಾಯ]





# ಕೋಳಿಯ ಬೆಲೆ

ಒಂದು ಗ್ರಾಮದಲ್ಲಿ ತಿಮ್ಮಯ್ಯನೆಂಬೊಬ್ಬ ಕುಂಬಾರನಿದ್ದನು. ಒಂದುವರ್ಷ ಸಂಕ್ರಾಂತಿ ಹಬ್ಬ ಬಂತು. ತಿಮ್ಮಯ್ಯನ ಹೆಂಡತಿ ಒಂದು ಕೋಳಿ ಕೊಂಡುತರುವಂತೆ ಗಂಡನಿಗೆ ಹೇಳಿದಳು. ಆ ಗ್ರಾಮದ ಜಮಿಾನುದಾರ ಸಂಜೀವಯ್ಯನ ಬಳಿಗೆ ಹೋಗಿ ತನಗೊಂದು ಕೋಳಿಯನ್ನು ಮಾರುವಂತೆ ಕೇಳಿದ ತಿಮ್ಮಯ್ಯ.

ಸಂಜೀವಯ್ಯ ತಿಮ್ಮಯ್ಯನಿಗೆ ಒಂದು ಕೋಳಿಮರಿಯನ್ನು ಕೊಟ್ಟು "ಈಗ ಕಾಸಿಲ್ಲದಿದ್ದರೆ ನಿಧಾನವಾಗಿ ಕೊಡುವಿಯಂತೆ. ಲೆಕ್ಕ ಬರೆಯಿಸಿರುತ್ತೇನೆ" ಎಂದನು. ತಿಮ್ಮಯ್ಯನಿಗೆ ಆ ಗ್ರಾಮದಲ್ಲಿ ಅಷ್ಟೊಂದು ಆದರ ತೋರಿಸಿದವರಿರಲಿಲ್ಲ. ಆದುದರಿಂದ ತಿಮ್ಮಯ್ಯ ಸಂಜೀವಯ್ಯನನ್ನು ಮನಃಪೂರ್ವಕವಾಗಿ ಹೊಗಳಿ ಕೊಂಡಾಡಿ ಮನೆಗೆ ಹಿಂತಿರುಗಿದನು.

ಅಂದು ತಿಮ್ಮಯ್ಯ ಅವನ ಹೆಂಡತಿ ಕೋಳಿಯನ್ನು ಕೊಯ್ದು ಅಡಿಗೆಮಾಡಿಕೊಂಡು ತೃಪ್ತಿಯಾಗಿ ಊಟಮಾಡಿದರು. ಕೊಂಚ ದಿನಗಳಾದ ನಂತರ ತಿಮ್ಮಯ್ಯ ಜಮಿಾನುದಾರನಿಗೆ ಕೋಳಿಯ ಬಾಬತ್ತು ಹಣವನ್ನು ಕೊಡಲು ಅವನಬಳಿಗೆ ಬಂದನು.

"ಈಗ ನನಗೆ ಕೈತುಂಬಾ ಕೆಲಸವಿದೆ. ಆ ಲೆಕ್ಕನೋಡಲು ಬಹಳ ಸಮಯ ಹಿಡಿಯುತ್ತದೆ. ಮತ್ತೆ ಎಂದಾದರೂ ಬಾ" ಎಂದ ಸಂಜೀವಯ್ಯ.

"ಕೋಳಿಯ ಬೆಲೆ ತೆಗೆದುಕೊಳ್ಳಲು ಲೆಕ್ಕವೇನು ನೋಡಬೇಕು ರಾಯರೇ? ಎಷ್ಟು ಕೊಡಬೇಕೋ ತಿಳಿಸಿ, ಲೆಕ್ಕ ಫೈಸಲ್ ಮಾಡಿ ಹೊರಟುಹೋಗುತ್ತೇನೆ" ಎಂದ ತಿಮ್ಮಯ್ಯ.

"ಅರೆ, ಅದೇನು ಚಿಕ್ಕಪುಟ್ಟ ಲೆಕ್ಕವಿಲ್ಲ ಕಣಯ್ಯ" ಎಂದು ತಿಮ್ಮಯ್ಯನನ್ನು ಕಳುಹಿಸಿಬಿಟ್ಟ ಜಮಿಾನುದಾರ.

ತಿಮ್ಮಯ್ಯ ಸಂಜೀವಯ್ಯನ ಮನೆಗೆ ಐದಾರುಬಾರಿ ತಿರುಗಾಡಿದನಂತರ ಒಂದು ದಿನ ಸಂಜೀವಯ್ಯ ಕಾಗದ ಸೀಸದಕಡ್ಡಿ ತೆಗೆದುಕೊಂಡು, ಲೆಕ್ಕ ಹಾಕಿ "ಕೋಳಿಯ ಬಾಬತ್ತು ಎಲ್ಲಾ ಸೇರಿ ಇನ್ನೂರ ಐವತ್ತು ರೂಪಾಯಿ ಚಿಲ್ಲರೆ ಆಗುತ್ತೆ. ಚಿಲ್ಲರೆಯ

ಡಿ. ಸುಬ್ರಹ್ಮಣ್ಯ

ಮಾತುಬಿಡು, ಇನ್ನೂರೈವತ್ತು ರೂಪಾಯಿ ಮಾತ್ರ ಕೊಟ್ಟುಬಿಡು, ತೀರಿತು" ಎಂದ.

ತಾನು ಊಟಮಾಡಿದ ಕೋಳಿಯ ಬೆಲೆ ಇನ್ನೂರೈವತ್ತು ರೂಪಾಯಿಯೆಂದಕೂಡಲೇ ತಿಮ್ಮಯ್ಯನ ಬಾಯಿಂದ ಮಾತೇ ಹೊರಡಲಿಲ್ಲ "ಒಂದು ಕೋಳಿಯ ಬೆಲೆ ಇನ್ನೂರೈವತ್ತು ರೂಪಾಯಿಯೆ? ಅದೇನಾದರೂ ಸುವರ್ಣ ಕೋಳಿಯೇ?" ಎಂದು ಕೇಳಿದನು.

"ನನ್ನ ಲೆಕ್ಕದಲ್ಲಿ ದಗಾಕೋರತನವೇನೂ ಇಲ್ಲ. ಬೇಕಾದರೆ ನಿನ್ನಿಷ್ಟ ಬಂದವರ ಹತ್ತಿರ ಹೋಗಿ ಲೆಕ್ಕ ಹಾಕಿಸಿಕೊಳ್ಳಬಹುದು. ನೀನು ತೆಗೆದುಕೊಂಡ ಕೋಳಿ ಇಂದಿನ ತನಕ ಎಷ್ಟು ಮೊಟ್ಟೆಗಳಿಡುತ್ತಿದ್ದುವು? ಅವುಗಳ ಬೆಲೆಯೆಲ್ಲಾ ನೀನು ಕೊಡಲೇಬೇಕು" ಎಂದ ಜಮೀನುದಾರ. ತಿಮ್ಮಯ್ಯ ಬೆಕ್ಕಸಬೆರಗಾದ. "ಈ ವಿಷಯ ಪಟೇಲರೇ ಇತ್ಯರ್ಥ ಮಾಡಲಿ" ಎಂದ ತಿಮ್ಮಯ್ಯ.

"ಅಗತ್ಯವಾಗಿ ಕೇಳು. ನಾನು ಬೇಡವೆಂತ ಹೇಳಿದೆನೇ?" ಎಂದ ಸಂಜೀವಯ್ಯ. ಪಟೇಲ ತನಗೆ ಅನುಕೂಲವಾಗಿ ತೀರ್ಪು ಕೊಡುವನೆಂದು ಜಮೀನುದಾರನಿಗೆ ತಿಳಿದಿತ್ತು.

ಇಬ್ಬರೂ ಒಟ್ಟಿಗೆ ಪಟೇಲರ ಹತ್ತಿರಕ್ಕೆ ಹೋದರು. ಸಂಜೀವಯ್ಯ ಪಟೇಲರೊಂದಿಗೆ "ಪಟೇಲರೇ, ತಿಮ್ಮಯ್ಯ ಮೊನ್ನೆ ಸಂಕ್ರಾಂತಿಯಲ್ಲ ಅದರ ಹಿಂದಿನ ಸಂಕ್ರಾಂತಿಯಂದು ನನ್ನಬಳಿ ಒಂದು ಕೋಳಿಮರಿ ಕೊಂಡುಕೊಂಡ. ಅದರಬಾಬತ್ತು ಹಣ ಕೊಡುತ್ತೇನೆ ಅಂತ ಹೇಳುತ್ತಿದ್ದಾನೆ. ಆ ಕೋಳಿ ಇಂದಿನ



ತನಕ ಎಷ್ಟು ಮೊಟ್ಟೆಗಳಿಡುತ್ತಿದ್ದುವೋ, ಅವುಗಳಲ್ಲಿ ಎಷ್ಟು ಮರಿಗಳಾಗಿ, ಮತ್ತೆ ಅವು ಮರಿಗಳಾಗಿ ಬೆಳೆದು ಎಷ್ಟಾರೆ ಮೊಟ್ಟೆಗಳಿಡುತ್ತಿದ್ದುವೋ ಲೆಕ್ಕಹಾಕಿ ಎರಡು ನೂರು ಐವತ್ತು ರೂಪಾಯಿಗಳಾಯಿತೆಂದು ಹೇಳಿದೆ. ಇದೋ ನೋಡಿ ಪಟ್ಟಿ. ನೀವೂಸಹ ನೋಡಿ. ಏನಾದರೂ ತಪ್ಪಿದೆಯೇನೋ ಹೇಳಿ. ಅನ್ಯಾಯದ ಸೊತ್ತು ನನಗೇಕೆ?'' ಎಂದ.

ಪಟೇಲರು ಪಟ್ಟಿಯನ್ನು ಮೇಲಿಂದ ಕೆಳಗೆ ಅತ್ತಿಂದಿತ್ತ ನೋಡಿ "ಏನು ತಿಮ್ಮಯ್ಯ, ಲೆಕ್ಕದಲ್ಲಿ ತಪ್ಪೇನಿಲ್ಲವಲ್ಲಾ" ಎಂದ.

"ನಾನು ಆಗಲೇ ಹೇಳಿದೆ. ತಿಮ್ಮಯ್ಯ ನಂಬಲಿಲ್ಲ. ಪಾಪ, ಅವಿದ್ಯಾವಂತ, ಲೆಕ್ಕಗಿಕ್ಕ ಬರೋಲ್ಲ" ಎಂದು ಸಂಜೀವಯ್ಯ ತಿಮ್ಮಯ್ಯ ನನ್ನು ನೋಡಿ ಮರುಕಗೊಂಡವನಂತೆ ಹೇಳಿದ. ತಿಮ್ಮಯ್ಯ ಹತಾಶನಾದನು. ಪಟೇಲರ ಅಪ್ಪಣೆ ಪಡೆದು ವಿಚಾರಮಗ್ನನಾಗಿ ಮನೆಯ ಕಡೆ ಹೋಗುತ್ತಿದ್ದ. ದಾರಿಯಲ್ಲಿ ಶ್ಯಾನುಭೋಗರು ಸಿಕ್ಕಿ "ಏನು ತಿಮ್ಮಯ್ಯಾ, ಏನೋ ದೀರ್ಘಾಲೋಚನೆಯಲ್ಲಿರುವಂತಿದೆ. ಏನಾಯಿತು?'' ಎಂದು ಕೇಳಿದರು. ತಿಮ್ಮಯ್ಯ ನಡೆದ ಸಂಗತಿಯನ್ನು ತಿಳಿಸಿದ.

"ಪಟೇಲರು ನಿನಗೆ ಬೇಸ್ತು ಕೊಟ್ಟರೆ? ನಾನು ಹೇಳಿದಂತೆ ಮಾಡುವೆಯಾ? ಸಂಜೀವಯ್ಯನಬಳಿಗೆ ಹೋಗಿ ನಾಳೆ ಊರಚಾವಡಿಯಲ್ಲಿ ಪಂಚಾಯತಿಗೆ ಒಪ್ಪಿಕೊಳ್ಳುವಂತೆ ಹೇಳು. ನಿನ್ನ ಪರವಾಗಿ ನಾನು ಸಾಕ್ಷ್ಯ ಕೊಡುವೆನೆಂದೂ ಸಹ ಹೇಳು" ಎಂದರು



ಶ್ಯಾನುಭೋಗರು. ಸ್ವಲ್ಪ ಸಂತೋಷಗೊಂಡು ತಿಮ್ಮಯ್ಯ ಸಂಜೀವಯ್ಯನಬಳಿಗೆ ಹೋಗಿ ಅಂತೆಯೇ ಹೇಳಿದ.

"ಮತ್ತೆ ಏನಯ್ಯಾ ಪಂಚಾಯತಿ? ಪಟೇಲರೇ ಹೇಳಿದರಲ್ಲಾ" ಎಂದ ಜಮೀನುದಾರ.

"ನನಗೆ ನಿಮ್ಮ ಲೆಕ್ಕವಾವುದೂ ಅರ್ಥವಾಗಲಿಲ್ಲ. ಪಂಚಾಯಿತಿದಾರರು ಏನುಹೇಳಿದರೆ ಹಾಗೆ ಮಾಡುತ್ತೇನೆ. ಶ್ಯಾನುಭೋಗರು ನನ್ನಕಡೆ ಸಾಕ್ಷ್ಯ ನುಡಿಯುವರು. ಶ್ಯಾನುಭೋಗರೆಂದರೆ ನಿಮಗೆ ಭಯವಿಲ್ಲವಷ್ಟೇ?" ಎಂದ ತಿಮ್ಮಯ್ಯ.

"ನನಗೆಂತಹದಯ್ಯಾ ಭಯ," ಎಂದು ಸಂಜೀವಯ್ಯ ಪಂಚಾಯಿತಿಗೆ ಒಪ್ಪಿಕೊಂಡ.

ಮಾರನೇಯದಿನ ಸಾಯಂಕಾಲ ಊರ ಚಾವಡಿಯಲ್ಲಿ ಎಲ್ಲರೂ ಸೇರಿದರು. ಆದರೆ ಶ್ಯಾನುಭೋಗರ ಪತ್ತೆಯಿಲ್ಲ. ಶ್ಯಾನುಭೋಗರೂ ತನಗೆ ಮೋಸಮಾಡಿದರೆಂದು ತಿಮ್ಮಯ್ಯ ಅನುಮಾನಗೊಂಡನು. ಎಲ್ಲರೂ ಅವನನ್ನು ನೋಡಿ ಮುಸಿಮುಸಿ ನಗಲಾರಂಭಿಸಿದರು. ಇನ್ನೇನು ಕತ್ತಲಾಗುವ ಸಮಯಕ್ಕೆ ಶ್ಯಾನುಭೋಗರು ಉಸಿರುಬಿಟ್ಟು ದಾವುಗಾಲು ಇಡುತ್ತ ಬೇಗಬೇಗನೆ ಅಲ್ಲಿಗೆ ಬಂದರು.

"ನಾನು ಬರುವುದು ತುಸತಡವಾಯಿತು, ಕ್ಷಮಿಸಬೇಕು. ಕೆಲಸಗಾರರು ಇಂದೇ ಬಿತ್ತನೆ ಮಾಡಬೇಕೆಂದು ಹೇಳಲು ಬೀಜವನ್ನು ಹುರಿದು ಬಿತ್ತಿಸಬೇಕಾಯಿತು. ಆ ಕೆಲಸ ಮುಗಿಸಿಕೊಂಡು ನೆಟ್ಟಗೆ ಇಲ್ಲಿಗೆ ಬರುತ್ತಿದ್ದೇನೆ" ಎಂದರು ಶ್ಯಾನುಭೋಗರು.

"ಬಿತ್ತನೆಯ ಬೀಜಗಳನ್ನು ಹುರಿಯುವುದೆಂದರೇನು ಶ್ಯಾನುಭೋಗರೇ? ಎಲ್ಲಾದರೂ ಹುರಿದಬೀಜಗಳು ಮೊಳಕೆ ಬಿಡುವುದುಂಟೇ?" ಮೂದಲಿಸಿದ ಪಟೇಲ.

"ತಿಮ್ಮಯ್ಯ ತಿಂದ ಕೋಳಿ ಮರಿಯಿಡುವಾಗ ಹುರಿದ ಬೀಜಗಳು ಮೊಳಕೆ ಬಿಡಲಾರದೆ ಎಂದುಕೊಂಡೆ" ಎಂದರು ಶ್ಯಾನುಭೋಗರು.

ಎಲ್ಲರೂ ಗೊಳ್ಳನೆ ನಕ್ಕರು. ಪಟೇಲನನ್ನು ಎಗತಾಳಿ ಮಾಡಿದರು. ಜಮೀನುದಾರನು ಮೆಲ್ಲನೆ ಅಲ್ಲಿಂದ ಜಾರಿಕೊಂಡನು. ಅವನು ತಿಮ್ಮಯ್ಯನನ್ನು ಮತ್ತೆ ಕೋಳಿಯ ಖರೀದಿ ಕೇಳುವ ಗೋಜಿಗೆ ಹೋಗಲಿಲ್ಲ.



# ತಮಾಷೆ!

## 1. ಅರ್ಥವೊಂದು ಉಪಯೋಗವೊಂದು!

ಇಂಗ್ಲೀಷು ತಿಂಗಳುಗಳಲ್ಲಿ ಸೆಪ್ಟೆಂಬರ್, ಅಕ್ಟೋಬರ್, ನವಂಬರ್, ಡಿಸೆಂಬರ್ ಈ ಹೆಸರುಗಳಲ್ಲಿರುವ ವಿಚಿತ್ರ ನೋಡಿದಿರಾ? ಈ ಹೆಸರುಗಳಲ್ಲಿ ಸಪ್ತ, ಅಷ್ಟ, ನವ, ದಶ—ಏಳು, ಎಂಟು, ಒಂಬತ್ತು, ಹತ್ತು—ಎಂಬ ಪದಗಳಿವೆ. ಅಂದರೆ ಸೆಪ್ಟೆಂಬರು ಏಳನೇ ತಿಂಗಳೆಂದೂ, ಅಕ್ಟೋಬರು ಎಂಟನೇ ತಿಂಗಳೆಂದೂ, ನವಂಬರು ಒಂಬತ್ತನೇ ತಿಂಗಳೆಂದೂ, ದಶಂಬರ ಹತ್ತನೇ ತಿಂಗಳೆಂದೂ ಅಂದು ಕೊಳ್ಳ ಬೇಕಾಗುತ್ತೆ. ಆದರೆ ವ್ಯವಹಾರದಲ್ಲಿ ಹಾಗೇಕಿಲ್ಲ?

ಏಕೆಂದರೆ, ಜೂಲಿಯಸ್ ಸೀಜರಿಗೆ ಪೂರ್ವದಲ್ಲಿ ರೋಮನ್ನರು ಮಾರ್ಚಿ ತಿಂಗಳಿಂದಲೇ ವರ್ಷಾರಂಭ ಮಾಡುತ್ತಿದ್ದರು. ಆಗಿನ ಅವರ ಸಂವತ್ಸರಾದಿ ನಮ್ಮ ಯುಗಾದಿಗೆ ಸಮೀಪವಾಗಿಯೇ ಇತ್ತು. ಅನಂತರ ಈ ಕ್ರಮವು ಬದಲಾಗಿ, ಜನವರಿಯಿಂದ ವರ್ಷಾರಂಭವು ಪ್ರಾರಂಭವಾಯಿತು. ಅಂತೆಯೇ ತಿಂಗಳ ಹೆಸರುಗಳಿಗೂ, ಅವುಗಳ ಸಂಖ್ಯೆಗಳಿಗೂ ವ್ಯತ್ಯಾಸವುಂಟಾಯಿತು.

## 2. ಮಾಡಿಮಾಡಿ ಮೊದಲಿಂದೇ ಬಂತು!

ಮೂರು ಅಂಕೆಗಳ ಒಂದು ಸಂಖ್ಯೆ ತೆಗೆದುಕೊಳ್ಳಿ. ಆ ಮೂರು ಅಂಕೆಯ ಸಾಲನ್ನು ಮತ್ತೆ ಅವೇ ಮೂರು ಅಂಕೆಗಳನ್ನು ಹಾಕಿ ಆರು ಅಂಕೆಗಳ ಸಾಲುಮಾಡಿರಿ. ಈ ಸಾಲನ್ನು ಏಳು ಅಂಕೆಯಿಂದ ಭಾಗಿಸಿರಿ, ಶೇಷ ಬಾರದು. ಹಾಗೆ ಭಾಗಿಸಿಬಂದ ಸಂಖ್ಯೆಯನ್ನು ಮತ್ತೆ 11 ರಿಂದ ಭಾಗಿಸಿರಿ. ಶೇಷಬಾರದು. ಎರಡನೇಸಾರಿ ಭಾಗಿಸಿದಾಗಬಂದ ಸಂಖ್ಯೆಯನ್ನು 13 ರಿಂದ ಭಾಗಿಸಿರಿ. ಶೇಷ ಬಾರದು. ಮೂರನೇಸಾರಿ ಭಾಗಿಸಿದಲ್ಲಿ ಬರುವ ಸಂಖ್ಯೆ ಮೊತ್ತಮೊದಲು ನೀವು ತೆಗೆದುಕೊಂಡ ಸಂಖ್ಯೆಗಳೇ!

[ಉದಾ: 365 ಮೊದಲು ತೆಗೆದುಕೊಳ್ಳಿ. 3, 65, 365 ಮಾಡುವುದೆಂದರೆ 365 ನ್ನು 1001 ರಿಂದ ಗುಣಿಸುವುದು ತಾನೆ? 1001 ರಲ್ಲಿ 7, 11, 13 ಸರಿಯಾಗಿಯೇ ಹೋಗುತ್ತವೆ. $7 \times 11 = 77$ ; $77 \times 13 = 1001$.]




ಹಲವಾರು ವರ್ಷಗಳ ಹಿಂದೆ ಜಯಸಿಂಹನು ಕಾಶ್ಮೀರದ ಅರಸನಾಗಿದ್ದನು. ಅವನ ತಮ್ಮ ಶಕ್ತಿಸಿಂಹನು ಅಣ್ಣನಮೇಲೆ ಪಿತೂರಿ ಹೂಡಿ, ಅಣ್ಣನನ್ನು ಅರಣ್ಯಕ್ಕೆ ಅಟ್ಟಿ ತಾನೇ ಅರಸನಾದನು. ಆದರೆ ಜಯಸಿಂಹನು ಪ್ರಜಾನುರಾಗಿಯಾಗಿದ್ದುದರಿಂದ ಅವನ ಸಾಮಂತರು ಕೆಲವರು ತಮ್ಮ ಪದವಿಗಳನ್ನು ತೊರೆದು ಜಯಸಿಂಹನ ಸೇವೆಮಾಡಲು ಆತನೊಂದಿಗೆ ಅವರೂ ಅರಣ್ಯಕ್ಕೆ ಹೊರಟರು. ಅಂತಲೇ ಜಯಸಿಂಹನು ಅರಣ್ಯದಲ್ಲಿದ್ದರೂ ಆತನಬಳಿ ಸ್ವಲ್ಪವಾದರೂ ಪರಿವಾರ ಇದ್ದೇ ಇರುತಿತ್ತು.

ಜಯಸಿಂಹನಿಗೆ ಲೀಲಾವತಿ ಎಂಬ ಮಗಳಿದ್ದಳು. ಶಕ್ತಿಸಿಂಹನಿಗೆ ಮಾಲತಿ ಎಂಬ ಒಬ್ಬಳೇ ಮಗಳು. ಅವರಿಬ್ಬರೂ ಸಮವಯಸ್ಕರಾಗಿದ್ದುದರಿಂದ ತನ್ನ ಮಗಳಿಗೆ ಜೊತೆಯಾಗಿರಲಿ ಎಂದುಕೊಂಡು ಶಕ್ತಿಸಿಂಹನು ಲೀಲಾವತಿಯನ್ನು ತಂದೆಯೊಂದಿಗೆ ಅರಣ್ಯಕ್ಕೆ ಕಳುಹಿಸಿಕೊಡಲಿಲ್ಲ. ತಂದೆಯರು ಶತ್ರುಗಳಾಗಿದ್ದರೂ ಮಕ್ಕಳಲ್ಲ.

ಲೀಲಾವತಿ ಮಾಲತಿಯರು ತುಂಬಾ ಅನ್ಯೋನ್ಯವಾಗಿದ್ದರು. ಲೀಲಾವತಿ ಆಗಾಗ ತನ್ನ ತಂದೆಯನ್ನು ನೆನೆಸಿಕೊಂಡು ದುಃಖಿಸುವಳು. ಆಗ ಮಾಲತಿ ಅವಳಿಗೆ ಸಮಾಧಾನ ಹೇಳುವಳು. ಅವಳ ಚಿಂತೆ ದೂರಮಾಡಲು ಅವಳು ಸತತ ಪ್ರಯತ್ನಿಸುವಳು.

ಹೀಗಿರಲು ಶಕ್ತಿಸಿಂಹನ ಆಸ್ಥಾನದಲ್ಲಿ ಒಂದುದಿನ ಮಲ್ಲಯುದ್ಧಕ್ಕೆ ಏರ್ಪಾಡಾಯಿತು. ಕಾಳಗದಲ್ಲಿ ಭಾಗವಹಿಸುವವರಲ್ಲಿ ಒಬ್ಬನು ಶಕ್ತಿಸಿಂಹನ ಆಸ್ಥಾನದ ಜಟ್ಟಿ. ಅವನು ಜಗಜಟ್ಟಿಯೆಂದು ಪ್ರಸಿದ್ಧಿಪಡೆದಿದ್ದನು. ಅವನೊಂದಿಗೆ ಹೋರಾಡಿ ಅನೇಕ ಜನ ಜಟ್ಟಿಗಳು ಪ್ರಾಣವನ್ನೇ ಕಳೆದುಕೊಂಡಿದ್ದರು. ಇಂದು ಅವನೊಂದಿಗೆ ಹೋರಾಡುವವನು ಒಬ್ಬ ಸಾಮಾನ್ಯ ಯುವಕನಂತೆ ಕಾಣಿಸಿದನು.

ಆ ಯುವಕನನ್ನು ಕಂಡಕೂಡಲೇ ಶಕ್ತಿಸಿಂಹನಿಗೆ ಮರುಕವಾಯಿತು. "ನಮ್ಮ ಜಟ್ಟಿ ಈ ತರುಣನನ್ನು ನಿಮಿಷಮಾತ್ರದಲ್ಲಿ ಸೋಲಿಸಿಬಿಡುತ್ತಾನೆ, ಸಂದೇಹವೇ ಇಲ್ಲ. ಆದುದರಿಂದ

ಯಚ್. ಆರ್. ಮುಳಿಬೈಲು

ಇಂದಿನ ಪಂದ್ಯದಲ್ಲಿ ಭಾಗವಹಿಸಬೇಡವೆಂದು ನೀವು ಆ ಯುವಕನಿಗೆ ಬುದ್ಧಿವಾದ ಹೇಳಿ'' ಎಂದು ಶಕ್ತಿಸಿಂಹನು ಲೀಲಾವತಿ ಮತ್ತು ಮಾಲತಿಯರೊಂದಿಗೆ ಹೇಳಿದನು.

ಆ ಯುವಕನ ಹೆಸರು ಮಕರಾಂಕ. ಭಟರು ಅವನನ್ನು ರಾಜಕುಮಾರಿಯರಿದ್ದ ಸ್ಥಳಕ್ಕೆ ಕರೆದುಕೊಂಡು ಹೋದರು. ಅವನ ಎಳೆವಯಸ್ಸು, ಅಂದಚೆಂದಗಳನ್ನು ನೋಡಿ ರಾಜಕುಮಾರಿಯರಿಗೆ ಕನಿಕರವುಂಟಾಯಿತು. "ನಮ್ಮ ಜಟ್ಟಿ ನಿಮಗಿಂತಲೂ ಧಷ್ಟಪುಷ್ಟ ನಾಗಿದ್ದಾನೆ. ಮಲ್ಲಯುದ್ಧದಲ್ಲಿ ನುರಿತವನು. ನಿಮಗಿಂತಲೂ ಬಲಿಷ್ಠರನೇಕರನ್ನು ಲೀಲಾ ಜಾಲವಾಗಿ ಸೋಲಿಸಿರುತ್ತಾನೆ, ಕೆಲವರನ್ನು ಕೊಂದೂಬಿಟ್ಟಿದ್ದಾನೆ. ಆದುದರಿಂದ ನೀವು ಇಂದಿನ ಪಂದ್ಯದಲ್ಲಿ ಭಾಗವಹಿಸಬೇಡಿ'' ಎಂದು ಅವರು ಮಕರಾಂಕನೊಂದಿಗೆ ಹೇಳಿದರು. ಮಾಲತಿಗಿಂತಲೂ ಲೀಲಾವತಿ ಅವನನ್ನು ಪದೇಪದೇ ಕೇಳಿಕೊಂಡಳು. ಆದರೆ ಮಕರಾಂಕನಿಗೆ ಅವರ ಮಾತು ರುಚಿಸಲಿಲ್ಲ. "ನನ್ನ ಶ್ರೇಯಸ್ಸನ್ನು ಕೋರಿ ನೀವು ಕೊಟ್ಟ ಸಲಹೆಗೆ ನಾನು ಕೃತಜ್ಞನಾಗಿದ್ದೇನೆ. ಈ ಕಾಳಗದಲ್ಲಿ ಸಾಯಲು ಸಿದ್ಧನಾಗಿಯೇ ಬಂದಿದ್ದೇನೆ. ಸತ್ತರೆ ನನಗಾಗಿ ದುಃಖಿಸುವವರು ಯಾರು ಇಲ್ಲ'' ಎಂದನು.

ಮಲ್ಲಯುದ್ಧ ಪ್ರಾರಂಭವಾಯಿತು. ಮಕರಾಂಕನು ಶಕ್ತಿಯಲ್ಲಿ ಕಡಿಮೆಯಾದರೂ ಯುಕ್ತಿಯಲ್ಲಿ ಪ್ರಚಂಡ. ಕೊಂಚಹೊತ್ತಿನ ನಂತರ ಅವನು ಆಜಾನುಬಾಹು ಮಲ್ಲನನ್ನು





ಸೋಲಿಸಿಬಿಟ್ಟನು. ಅಲ್ಲಿ ನೆರೆದಿದ್ದ ಜನ ಸಮೂಹ ಆಶ್ಚರ್ಯದಿಂದ ಬೆರಗಾದರು. ಎರಡು ಕ್ಷಣಗಳ ನಂತರ ಹರ್ಷದಿಂದ ಕೈ ಚಪ್ಪಾಳೆ ತಟ್ಟಿದರು.

ಶಕ್ತಿಸಿಂಹನು ಮಕರಾಂಕನನ್ನು ಹತ್ತಿರಕ್ಕೆ ಬರಮಾಡಿಕೊಂಡು "ವತ್ಸಾ, ನಿನ್ನ ಹೆಸರೇನು? ನಿನ್ನ ಮಾತಾಪಿತರು ಯಾರು?" ಎಂದು ಪ್ರೀತಿಯಿಂದ ಕೇಳಿದನು.

"ಮಹಾಪ್ರಭು, ನನ್ನ ಹೆಸರು ಮಕರಾಂಕ. ನನ್ನ ಪಿತನ ಹೆಸರು ಗೋಪಾಲದೇವ" ಎಂದ ಮಕರಾಂಕ ಮೆಲುದನಿಯಲ್ಲಿ.

ಗೋಪಾಲದೇವನ ಹೆಸರನ್ನು ಕೇಳಿ ದಾಕ್ಷಣ ಶಕ್ತಿಸಿಂಹನ ಮುಖ ಬಾಡಿತು. ಆದಕ್ಕೆ ಕಾರಣವಿಲ್ಲದಿರಲಿಲ್ಲ. ಗೋಪಾಲದೇವನು ಕೆಲವಾರು ವರ್ಷಗಳ ಕೆಳಗೆ ಸತ್ತು ಹೋಗಿದ್ದರೂ, ಜೀವದಿಂದಿದ್ದಾಗ ಜಯಸಿಂಹನ ಆಪ್ತ ಸ್ನೇಹಿತನಾಗಿದ್ದನು. ಜಯಸಿಂಹನ ಆಪ್ತರು ಯಾರಾದರೂ ಸರಿ ಶಕ್ತಿಸಿಂಹನಿಗೆ ಹಿಡಿಸುತ್ತಿರಲಿಲ್ಲ. "ನೀನು ಮತ್ತೆ ಯಾರ ಮಗನಾಗಿದ್ದರೂ ನಾನು ಸಂತೋಷಪಡುತ್ತಿದ್ದೆ" ಎಂದು ಹೇಳಿ ಶಕ್ತಿಸಿಂಹನು ಆಸನದಿಂದ ಎದ್ದು ಒಳಕ್ಕೆ ಹೊರಟುಬಿಟ್ಟನು.

ಆ ಯುವಕನು ತನ್ನ ತಂದೆಯ ಮಿತ್ರನ ಮಗನೆಂದು ಅರಿತು ಲೀಲಾವತಿ ಆನಂದಚಿತ್ತಳಾದಳು. ಮಲ್ಲಯುದದಲ್ಲಿ ಪ್ರತಿಭೆಯನ್ನು ತೋರಿಸಿದರೂ ರಾಜನು ತನ್ನನ್ನು ಉದಾಸೀನಭಾವದಿಂದ ನೋಡಿದನೆಂದು ಮಕರಾಂಕನಿಗೆ ದುಃಖವೂ, ಬೇಸರವೂ ಆಯಿತು. ರಾಜಕುಮಾರಿಯರು ಅವನ ಅಸಮಾಧಾನವನ್ನು ಗಮನಿಸಿ ಅಂತಃಪುರಕ್ಕೆ ಹೊರಡುವ ಮುಂಚೆ ಮಕರಾಂಕನ ಬಳಿಗೆ ಬಂದು ಅವನು ತೋರಿದ ಸಾಹಸದಲ್ಲಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಲೀಲಾವತಿ ತನ್ನ ಕೊರಳಲ್ಲಿದ್ದ ಮುತ್ತಿನಸರವನ್ನು ತೆಗೆದು ಅವನಿಗೆ ಕೊಡುತ್ತಾ "ನನ್ನ ಜ್ಞಾಪಕಾರ್ಥವಾಗಿ ಇದನ್ನು ನೀವು ಹಾಕಿಕೊಳ್ಳಿ. ಇದಕ್ಕಿಂತಲೂ ಹೆಚ್ಚಿನ ಬಹುಮಾನ ಕೊಡಲು ನನ್ನಬಳಿ ಈಗೇನೂ ಇಲ್ಲ" ಎಂದಳು.

ಅಂದಿನಿಂದ ಲೀಲಾವತಿ ಅಡಿಗಡಿಗೆ ಮಕರಾಂಕನನ್ನು ಕುರಿತು ಮಾತನಾಡುವುದನ್ನು ಗಮನಿಸಿದ ಮಾಲತಿ "ಏನೋ ಅಕ್ಕ, ನೀನು

ಆ ಯುವಕನನ್ನು ಪ್ರೇಮಿಸುವೆಯಾ?'' ಎಂದು ಪರಿಹಾಸ್ಯಮಾಡುತ್ತಿದ್ದಳು.

"ಅವರ ತಂದೆ ನಮ್ಮ ತಂದೆಯವರ ಆಪ್ತ ಸ್ನೇಹಿತರಾದಾಗ ಅವರು ನನ್ನ ಆಪ್ತ ವರ್ಗ ದವರಾಗಲಿಲ್ಲವೇ'' ಎಂದು ತನ್ನ ವರ್ತನೆ ಯನ್ನು ಸಮರ್ಥಿಸಿಕೊಳ್ಳುವಳು ಲೀಲಾವತಿ.

ಶಕ್ತಿಸಿಂಹನಿಗೆ ಮಕರಾಂಕನಮೇಲುಂಟಾದ ಮತ್ಸರ ಕ್ರಮೇಣ ಲೀಲಾವತಿಯ ಕಡೆಗೂ ಹೊರಳಿತು. ಪ್ರಜೆಗಳಿಗೆ ಜಯ ಸಿಂಹನಮೇಲಿನ ಅಭಿಮಾನವಿನ್ನೂ ಕಡಿಮೆ ಯಾಗಲಿಲ್ಲ. ಮಾಲತಿಯನ್ನು ಮೆಚ್ಚಿಕೊಳ್ಳು ತ್ತಿದ್ದರು ಜನ. ಆದರೆ ಲೀಲಾವತಿಯನ್ನು ಕಂಡರೆ ಅದಕ್ಕಿಂತಲೂ ಹೆಚ್ಚಿನ ಮಮತೆ ತೋರುವರು. ಲೀಲಾವತಿಯನ್ನು ಕಂಡಾಗ ಲೆಲ್ಲಾ ಅವರಿಗೆ ಜಯಸಿಂಹನು ಜ್ಞಾಪಕಕ್ಕೆ ಬರುತ್ತಿದ್ದನು.

ಧೀರ್ಘಾಲೋಚನೆ ಮಾಡಿ ಒಂದುದಿನ ಶಕ್ತಿಸಿಂಹನು ಲೀಲಾವತಿಯಬಳಿಗೆ ಬಂದು "ನಿನಗೆ ಇನ್ನು ಇಲ್ಲಿ ಸ್ಥಳವಿಲ್ಲ. ನೀನೂ ಸಹ ನಿಮ್ಮ ತಂದೆಯ ದಾರಿ ಹಿಡಿ'' ಎಂದು ಕಠಿನ ವಾಗಿ ನುಡಿದನು.

"ಅದೇನಪ್ಪಾ ಹಾಗೆ ಹೇಳುವಿರಿ? ನಮ್ಮಿಬ್ಬರ ಶರೀರಗಳು ಬೇರೆಯಾಗಿದ್ದರೂ ಮನಸ್ಸೆಲ್ಲಾ ಒಂದೆ. ಈಗ ಅವಳು ಆರಣ್ಯಕ್ಕೆ ಹೋದರೆ ನಾನೊಂದು ಕ್ಷಣವಾದರೂ ಇಲ್ಲಿರ ಲಾರೆ. ನಮ್ಮಿಬ್ಬರಗೆಳೆತನವಾಗುವ ಮೊದಲೇ ನೀವು ಅವಳನ್ನು ಕಳುಹಿಸಿದ್ದರೆ ಆಗಿನ ಮಾತು



ಬೇರೆ. ಈಗ ಇಷ್ಟುಹೊಂದಿರುವ ನಮ್ಮನ್ನು ಅಗಲಿಸುವುದು ಅನ್ಯಾಯ'' ಎಂದು ಮಾಲತಿ ತಂದೆಗೆ ಹೇಳಿದಳು.

"ನೀನೆಗೆಲ್ಲೋ ಹುಚ್ಚು. ಈ ಲೀಲಾವತಿ ಮಾಯವಿನಿ, ಅಮಾಯಕತೆ ಸೋಗುಹಾಕಿ, ಮೌನವಾಗಿರುವುದನ್ನು ಕಂಡು ಜನರೆಲ್ಲ ಅವ ಳನ್ನು ಮೆಚ್ಚಿಕೊಳ್ಳುತ್ತಾರೆ. ಯಾರೂ ನಿನ್ನಕಡೆ ಗಮನ ಕೊಡುವುದಿಲ್ಲ. ನಿನ್ನ ಅಂತಸ್ತೇನು ಅವಳ ಅಂತಸ್ತೇನು? ಅವಳು ಇಲ್ಲಿಂದ ಹೊರಟುಹೋದ ಕ್ಷಣದಿಂದ ಪ್ರಜೆಗಳು ನಿನ್ನನ್ನು ಕೊಂಡಾಡುವರು ತಿಳಿಯಿತೆ?'' ಎಂದ ಶಕ್ತಿಸಿಂಹ.

ತಂದೆಯೊಂದಿಗೆ ವಾದಿಸಿ ಪ್ರಯೋಜನವಿಲ್ಲ ವೆಂದು ತಿಳಿದು, ಮಾಲತಿ ತಾನು ಲೀಲಾವತಿ

ಯೊಂದಿಗೆ ಅರಣ್ಯಕ್ಕೆ ಹೋಗಲು ನಿರ್ಧರಿಸಿದಳು. ಲೀಲಾವತಿ ಬೇಡ ಬೇಡವೆಂದು ಎಷ್ಟು ಹೇಳಿದರೂ ಅವಳು ಕೇಳಲಿಲ್ಲ. "ನಾವು ಈ ಉಡುಪುಗಳನ್ನು ಧರಿಸಿಕೊಂಡು ಹೋಗುವುದು ಅಪಾಯಕರ. ಸಾಧಾರಣ ಕುಟುಂಬ ಸ್ತ್ರೀಯರ ದುರುಸಿನಲ್ಲಿ ಹೋದರೆ ನಮ್ಮನ್ನು ಯಾರೂ ಗುರುತು ಹಿಡಿಯಲಾರರು" ಎಂದಳು ಮಾಲತಿ.

"ಇಬ್ಬರೂ ಸ್ತ್ರೀಯರಂತೆ ಹೋಗುವುದಕ್ಕಿಂತಲೂ ಒಬ್ಬರು ಪುರುಷವೇಷ ಧರಿಸುವುದು ಉತ್ತಮ. ನಾನು ನಿನಗಿಂತಲೂ ದೊಡ್ಡವಳಂತೆ ಕಾಣುವೆನು. ನಾನು ಪುರುಷ ವೇಷ ಧರಿಸುವೆನು. ಸೋದರ ಸೋದರಿಯರಂತೆ ಕಾಣಿಸಿಕೊಂಡು ಇಲ್ಲಿಂದ ಹೊರಟುಬಿಡೋಣ" ಎಂದಳು ಲೀಲಾವತಿ. ಲೀಲಾವತಿ ತನ್ನ ಹೆಸರನ್ನು ಪುಷ್ಕರನೆಂದು ಬದಲಾಯಿಸಿಕೊಂಡಳು. ಮಾಲತಿ ಲಕ್ಷ್ಮಿ ಎಂದು ಹೆಸರಿಟ್ಟುಕೊಂಡಳು. ಅವರು ತಮ್ಮಿಂದ ಸಾಧ್ಯವಾದಷ್ಟು ನಗನಾಣ್ಯಗಳನ್ನು, ಅರಿವೆ ಅಂಚಡಿಗಳನ್ನು ಸಂಗಡ ತೆಗೆದುಕೊಂಡು, ಸಾಮಾನ್ಯವಾದ ಉಡಿಗೆ ತೊಡಿಗೆಗಳನ್ನು ಧರಿಸಿ, ಅರ್ಧರಾತ್ರಿ ಸಮಯದಲ್ಲಿ ಅರಮನೆಯನ್ನು ತೊರೆದು, ಅರಣ್ಯ ಮಾರ್ಗವಾಗಿ ಹೊರಟರು. ಅರಣ್ಯದಲ್ಲಿ ವಾಸಿಸುತ್ತಿದ್ದ ಜಯಸಿಂಹನನ್ನು ಕೂಡಿಕೊಳ್ಳಲು ಅವರು ನಿಶ್ಚಯಿಸಿದರು.

ಸಂಗಡ ಹಣವಿದ್ದ ಕಾರಣ ದಾರಿಯುದ್ದಕ್ಕೂ ಯಾವ ತಾಪತ್ರಯವೂ ಇಲ್ಲದೆ,



ಪ್ರಯಾಣಸಾಗಿತು. ಅದರೆ ಅರಣ್ಯವನ್ನು ಪ್ರವೇಶಿಸಿದ ಕೂಡಲೇ ಒಂದಾದಮೇಲೊಂದ ರಂತೆ ಕಷ್ಟಗಳು ಪ್ರಾಪ್ತವಾದುವು. ಬಹು ದೂರ ಅರಣ್ಯದಲ್ಲಿ ಹೋದರೂ ಅವರಿಗೆ ಜಯಸಿಂಹನ ಸುಳಿವು ಸಿಗಲಿಲ್ಲ. ಕ್ರೂರಮೃಗ ಗಳ ಹೆದರಿಕೆ ಬೇರೆ. ಜೊತೆಗೆ ತಂದಿದ್ದ ತಿಂಡಿ ತೀರ್ಥಗಳೆಲ್ಲಾ ಮುಗಿದುಹೋಗಿದ್ದುವು. ರಾತ್ರಿ ತಲೆ ಮರೆಯಿಸಿಕೊಳ್ಳಲು ತಾವಿಲ್ಲ.

ಮಾಲತಿ ಒಂದು ಬಂಡೆಯಮೇಲೆ ಕುಳಿತು "ಅಕ್ಕ ನನಗೆ ಹಸಿವಿನಿಂದ ಬವಳಿ ಬರು ವಂತಿದೆ. ಇನ್ನು ಒಂದೇ ಒಂದು ಹೆಜ್ಜೆ ಯನ್ನೂ ಮುಂದಿಡಲಾರೆ" ಎಂದಳು. ಇಬ್ಬರೂ ಕಣ್ಣೀರು ಸುರಿಸುತ್ತ ದಿಙ್ಮೂಢ ರಾಗಿರಲು ಅತ್ತ ಕಡೆ ಒಬ್ಬ ರೈತನು ಬಂದನು.

"ಅಯ್ಯಾ, ತಾವು ದೇವರಂತೆ ಬಂದಿರಿ. ಈಕೆ ನನ್ನ ತಂಗಿ ತಿಂಡಿಯಿಲ್ಲದೆ ಸುಸ್ತಾಗಿ ದ್ದಾಳೆ. ನಮಗಿಷ್ಟು ತಿಂಡಿ ಮತ್ತು ವಿಶ್ರಾಂತಿ ಪಡೆಯಲು ಸ್ಥಳ ಸಿಗುವ ಜಾಗ ತೋರಿಸಿದರೆ ನಿಮಗೆ ಪುಣ್ಯ ಬರುತ್ತಿದೆ" ಎಂದಳು ಪುರುಷ ವೇಷಧಾರಿ ಲೀಲಾವತಿ.

"ಅಯ್ಯಾ, ಸಮೀಪದಲ್ಲೇ ನಮ್ಮ ಧಣಿಯ ಗುಡಿಸಲು ಇದೆ. ಅಲ್ಲಿಗೆ ಬನ್ನಿ, ಇಂದೊ ನಾಳೆಯೋ ನಮ್ಮ ಧಣಿ ಆ ಗುಡಿಸಲನ್ನು ಮಾರಿ ನಗರಕ್ಕೆ ಹೋಗುವವರಿದ್ದಾರೆ. ಅದು ವರೆಗೆ ನಮ್ಮ ಗುಡಿಸಲಿನಲ್ಲಿ ವಿಶ್ರಾಂತಿ ಪಡೆಯ ಬಹುದು" ಎಂದ ರೈತ.

ರಾಜಕುಮಾರಿಯರಿಗೆ ಈ ವ್ಯವಸ್ಥೆ ಲೇಸೆನಿ ಸಿತು. ಅವರು ರೈತನೊಂದಿಗೆ ಗುಡಿಸಲಿಗೆ





ಹೋಗಿ, ಮಿತ ಆಹಾರವನ್ನು ಭುಜಿಸಿದರು. ನಂತರ ಆ ಗುಡಿಸಲನ್ನು ಅವರೇ ಕೊಂಡು ಕೊಂಡರು. ಗುಡಿಸಿಲಿನಲ್ಲಿ ಆಹಾರಪದಾರ್ಥ ಗಳಿದ್ದುವು. ಅವುಗಳನ್ನು ಉಪಯೋಗಿಸಿ ಕೊಳ್ಳುತ್ತ ಅವರು ಜಯಸಿಂಹನಿರುವ ಸ್ಥಳ ವನ್ನು ಹುಡುಕಾಡ ತೊಡಗಿದರು.

ಒಂದಾದ ಮೇಲೊಂದರಂತೆ ದಿನಗಳು ಉರುಳುತ್ತಿದ್ದವು. ಎಷ್ಟು ಹುಡುಕಿದರೂ ಅವ ರಿಗೆ ಜಯಸಿಂಹನಿದ್ದ ಸ್ಥಳ ಸಿಕ್ಕಲೇ ಇಲ್ಲ. ಒಂದು ದಿನ ಹಾಗೆ ಸುತ್ತಾಡುತ್ತಿರಲು ಅವ ರಿಗೆ ಒಂದು ಮರದಮೇಲೆ ಯಾರೋ ಲೀಲಾ ವತಿ ಎಂದು ಕೆತ್ತಿರುವುದು ಕಾಣಿಸಿತು. ಇದು ಮಕರಾಂಕನ ಕೆಲಸವೆಂದು ಲೀಲಾವತಿ ಕೂಡಲೇ ಊಹಿಸಿದಳು. ಯಾವ ಕಾರಣ ದಿಂದಲೋ ಆತನೂ ಈ ಅರಣ್ಯಕ್ಕೇ ಬಂದು ಎಲ್ಲೋ ಇರುವನೆಂದು ಆಕೆಗೆ ತೋರಿತು.

ಅವಳ ಊಹೆ ಸುಳ್ಳಾಗಿರಲಿಲ್ಲ. ಮಕ ರಾಂಕನೂಸಹ ಪರಿಸ್ಥಿತಿಗಳ ಒತ್ತಾಯಕ್ಕೆ ಗುರಿ ಯಾಗಿ ಅರಣ್ಯವನ್ನು ಸೇರಿಕೊಂಡಿದ್ದನು. ಮಕ ರಾಂಕ ಗೋಪಾಲದೇವನ ಕಿರಿಯುಮಗ. ತಂದೆ ತೀರಿಕೊಂಡಾಗ ಅವನಿನ್ನೂ ಎಳೆವಯಸ್ಸಿನ ಬಾಲಕ. ಸಾಯುವ ಮುಂಚೆ ಗೋಪಾಲ ದೇವನು ತನ್ನ ಕಿರಿಯ ಮಗನನ್ನು ಹಿರಿಯ ಮಗನಾದ ಶಶಾಂಕನವಶಕ್ಕೆ ಒಪ್ಪಿಸಿ "ಮಗೂ, ಇವನನ್ನು ಕಾಪಾಡುವಭಾರ ನಿನ್ನದು. ಇವನಿಗೆ ವಿದ್ಯಾಬುದ್ಧಿಗಳನ್ನು ಕಲಿಸಿ ಉತ್ತಮ ಪೌರನನ್ನಾಗಿ ಮಾಡು" ಎಂದು ಹೇಳಿದ್ದನು.

ಆದರೆ ಶಶಾಂಕನು ತಮ್ಮನಿಗೆ ದ್ರೋಹ ಬಗೆದನು. ಮಕರಾಂಕನನ್ನು ಶಾಲೆಗೆಕಳು ಹಿಸಲಿಲ್ಲ. ಅವನ ಯೋಗಕ್ಷೇಮದಕಡೆ ಗಮನ ಕೊಡಲಿಲ್ಲ. ಆದರೂ ಮಕರಾಂಕನು ತಂದೆ ಯಂತೆಯೇ ಸಾಧುಸ್ವಭಾವದವನಾದು ದರಿಂದ ನಡೆನುಡಿಗಳಿಂದ, ವಿನಯವಿಧೇಯತೆ ಗಳಿಂದ ವಿದ್ಯಾವಂತರಿಗಿಂತಲೂ ಮಿಗಿಲೆನಿಸಿ ಕೊಂಡನು. ದಿನದಿನಕ್ಕೆ ಅವನ ಅಭಿವೃದ್ಧಿ ಯನ್ನು ಕಂಡು ಶಶಾಂಕನ ಹೊಟ್ಟೆ ಉರಿಯು ತಿತ್ತು. ಅವನನ್ನು ಹೇಗಾದರೂ ನಾಶಮಾಡುವ ಉದ್ದೇಶದಿಂದ ಶಶಾಂಕನು ಅವನನ್ನು ಮಲ್ಲ ಯುದ್ಧ ಮಾಡಲು ತನ್ನ ಸ್ನೇಹಿತರಕಡೆಯಿಂದ ಹೇಳಿಸಿ ಒಪ್ಪಿಸಿದನು. ಅಣ್ಣನು ತನ್ನ ಸಾವನ್ನು ಕೋರುತ್ತಿರುವನೆಂದು ಗ್ರಹಿಸಿದ ಮಕ

ರಾಂಕನು ಮರುಮಾತನಾಡದೆ ಮಲ್ಲ ಯುದ್ಧಪಂದ್ಯಕ್ಕೆ ಒಪ್ಪಿಕೊಂಡನು. ಆದರೆ ಮಕರಾಂಕನು ಮಲ್ಲಯುದ್ಧದಲ್ಲಿ ವಿಜಯ ಪಡೆಯಲು ಶಶಾಂಕನ ಆಶೆಯೆಲ್ಲಾ ನಿರಾಶೆ ಯಾಯಿತು. ವಿಜಯಿಯಾದ ತನ್ನ ತಮ್ಮನು ಮಲಗಿರುವಾಗ ಅವನ ಕೋಣೆಗೆ ಬೆಂಕಿ ಯಿಡಲು ನಿರ್ಧರಿಸಿದನು.

ಅದೃಷ್ಟವಶಾತ್ ಈ ರಹಸ್ಯ ಒಬ್ಬ ಮುದುಕನಿಗೆ ತಿಳಿಯಿತು. ಅವನು ಮಕರಾಂಕ ನೊಂದಿಗೆ ಮುಂದೆ ಉಂಟಾಗಲಿರುವ ತೊಂದರೆ ಯನ್ನು ತಿಳಿಸಿ, ಯಾರಿಗೂ ಗೊತ್ತಿಲ್ಲದಂತೆ ಮಕರಾಂಕನನ್ನು ಅರಣ್ಯಕ್ಕೆ ಕರೆದುಕೊಂಡು ಹೋದನು. ಅರಣ್ಯದಲ್ಲಿ ತಿಂಡಿತೀರ್ಥಗಳಿಲ್ಲದೆ ಅವರು ತುಂಬಾ ಆವಸ್ಥೆಪಟ್ಟರು. ವೃದ್ಧನು ಬವಳಿಬಂದು ಕೆಳಗೆಬಿದ್ದುಬಿಟ್ಟನು. ಅವನನ್ನು ಒಂದು ಮರದ ಕೆಳಗೆ ಮಲಗಿಸಿ, ಮಕ ರಾಂಕನು ಮುಂದೆ ನಡೆದನು. ಹಾಗೇ ಹೋಗುತ್ತಿರಲು ಅವನಿಗೆ ಜಯಸಿಂಹನು ತನ್ನ ಅನುಚರರೊಂದಿಗೆ ಇರುವಸ್ಥಳ ಸಿಕ್ಕಿತು.

ಆಗತಾನೆ ಜಯಸಿಂಹನು ತನ್ನ ಸಂಗಡಿಗ ರೊಂದಿಗೆ ಊಟಕ್ಕೆ ಕುಳಿತುಕೊಳ್ಳುತ್ತಿದ್ದನು. ಮಕರಾಂಕನು ಹಸಿವಿನ ಬಾಧೆಗೆ ತಾಳಲಾರದೆ ಆವೇಶದಿಂದ ಕತ್ತಿ ಹಿರಿದು "ಯಾರಾದರೂ ಅಲ್ಲಿರುವ ಆಹಾರವನ್ನು ಮುಟ್ಟಿದರೆ ನನ್ನ ಖಡ್ಗಕ್ಕೆ ಬಲಿಯಾಗಬೇಕಾಗೀತು, ಹುಷಾರ್" ಎಂದು ಕರ್ಕಶವಾಗಿ ಕೂಗಿಕೊಂಡನು. ಜಯಸಿಂಹನು ತಾಳ್ಮೆಯಿಂದ "ಇಷ್ಟು



ಮಾತ್ರಕ್ಕೆ ಯಾರನ್ನೇಕೆ ಕೊಲ್ಲಬೇಕು, ಮಗು. ಹಸಿವಾಗಿದ್ದರೆ ನಮ್ಮೊಂದಿಗೆ ಕುಳಿತು ಊಟ ಮಾಡು. ನಾವು ಬೇಟೆಯಾಡಿ ತಂದ ಆಹಾರ ಯಥೇಚ್ಛವಾಗಿದೆ. ನಿನಗೆ ಯಾರೂ ಅಡ್ಡಿ ಮಾಡುವುದಿಲ್ಲ" ಎಂದನು.

ಮಕರಾಂಕನಿಗೆ ತುಂಬಾ ನಾಚಿಕೆ ಯಾಯಿತು. ಅವನು ಮೆಲುದನಿಯಲ್ಲಿ "ಅಯ್ಯಾ, ನನ್ನ ದುಡುಕುತನವನ್ನು ಕ್ಷಮಿಸಿ. ಈ ಕಾಡಿನಲ್ಲೂ ಸೌಜನ್ಯಶಾಲಿಗಳಿರುವರೆಂದು ನಾನು ಕನಸಿನಲ್ಲೂ ನೆನೆಸಿರಲಿಲ್ಲ. ನನ್ನ ಕ್ಷುದ್ಬಾಧೆಯೇ ಈ ಆವೇಶಕ್ಕೆ ಕಾರಣ. ನನ ಗಿಂತಲೂ ಹಸಿವಿನ ಬಾಧೆಯಿಂದ ತೊಳಲಾಡು ತ್ತಿರುವ ಮುದುಕನೊಬ್ಬನಿದ್ದಾನೆ. ಅವನನ್ನೂ ಇಲ್ಲಿಗೆ ಕರೆದುಕೊಂಡು ಬರುತ್ತೇನೆ. ಅವನು

ತಿನ್ನುವತನಕ ನಾನು ಏನನ್ನೂ ಮುಟ್ಟಲಾರೆ'' ಎಂದು ಹೇಳಿ, ತನ್ನ ನೌಕರನಿದ್ದ ಸ್ಥಳಕ್ಕೆ ಹೋಗಿ, ಅವನನ್ನು ಹೆಗಲಮೇಲೇರಿಸಿಕೊಂಡು ಅಲ್ಲಿಗೆ ಬಂದನು. ತರುವಾಯ ಎಲ್ಲರೂ ಒಟ್ಟಿಗೆ ಕುಳಿತು ಊಟಮಾಡಿದರು.

ಊಟವಾದನಂತರ ಜಯಸಿಂಹನು ಮಕರಾಂಕನನ್ನು ಕುರಿತು ಎಲ್ಲ ವಿಷಯಗಳನ್ನೂ ತಿಳಿದುಕೊಂಡನು. ಅವನು ತನ್ನ ಗೆಳೆಯನ ಮಗನೆಂತಲೂ, ಅವನೂಸಹ ತನ್ನ ಸೋದರನ ವಂಚನೆಗೆ ಗುರಿಯಾಗಿರುವನೆಂದೂ ತಿಳಿದು ಕನಿಕರಗೊಂಡು ತನ್ನೊಂದಿಗೇ ಇರುವಂತೆ ಹೇಳಿ ಒಪ್ಪಿಸಿದನು.

ರಾಜಕುಮಾರಿಯರು ರೈತನ ಗುಡಿಸಲನ್ನು ಕೊಂಡುಕೊಂಡ ಮೂರುದಿನಗಳಿಗೆ ಮಕರಾಂಕನು ಅರಣ್ಯಕ್ಕೆ ಬಂದನು. ಅವನು ಮರಗಳಮೇಲೆ ಕೆತ್ತಿದ್ದ ಲೀಲಾವತಿಯ ಹೆಸರನ್ನು ನೋಡಿ ರಾಜಕುಮಾರಿಯರು ಅವನು ಅಲ್ಲೇ ಎಲ್ಲೋ ಇರುವನೆಂದು ಗ್ರಹಿಸಿದರು.

ಮತ್ತೆ ಕೊಂಚದಿನಗಳನಂತರ ಪುರುಷ ವೇಷದಲ್ಲಿದ್ದು ಪುಷ್ಕರನೆಂದು ಹೆಸರಿಟ್ಟುಕೊಂಡ ಲೀಲಾವತಿ ಅರಣ್ಯದಲ್ಲಿ ಒಬ್ಬೊಂಟಿಗನಾಗಿ ಕುಳಿತಿದ್ದ ಮಕರಾಂಕನನ್ನು ಕಂಡಳು. ಅವನ ಕೊರಳಲ್ಲಿ ತಾನು ಕೊಟ್ಟಿದ್ದ ಚಂದ್ರಹಾರ ಅವಳ ಕಣ್ಣಿಗೆ ಬಿತ್ತು. ಇಬ್ಬರಿಗೂ ಪರಿಚಯವಾದನಂತರ ಮಕರಾಂಕನು ಪುಷ್ಕರನಲ್ಲಿ ತನ್ನ ಪ್ರೇಯಸಿ ಲೀಲಾವತಿಯ ಲಕ್ಷಣಗಳನ್ನು ಕಂಡು ಚಕಿತನಾದನು. ಆದರೆ ಲೀಲಾವತಿ ಬೇಕೆಂತಲೇ ತುಸ ಬದಲಾಗಿ, ತನ್ನ ವೇಷಕ್ಕೆ



ಅನುಗುಣವಾಗಿ, ಮಾತನಾಡುತ್ತಿದ್ದುದರಿಂದ ಅವನಿಗೆ ನಿಜಾಂಶ ತಿಳಿಯದಾಯಿತು.

"ಯಾರೋ ತರುಣನು ಇಲ್ಲಿನ ಮರಗಳ ಮೇಲೆಲ್ಲಾ ಲೀಲಾವತಿ ಎಂದು ಕೆತ್ತಿ ಮರಗಳನ್ನೆಲ್ಲಾ ಸುಮ್ಮನೆ ಹಾಳುಮಾಡುತ್ತಿದ್ದಾನೆ" ಎಂದು ಹೇಳಿದಳು ಲೀಲಾವತಿ.

ಮಕರಾಂಕನು ಅದು ತನ್ನ ಕೆಲಸವೇ ಎಂದು ಒಪ್ಪಿಕೊಂಡು "ಲೀಲಾವತಿಯನ್ನು ನನ್ನಿಂದ ಮರೆಯಲು ಸಾಧ್ಯವಿಲ್ಲ." "ಹಾಗಾದರೆ ನೀವು ದಿನಾ ನಮ್ಮ ಗುಡಿಸಲಿಗೆ ಬನ್ನಿ. ಅಲ್ಲಿ ನಾನೂ ನನ್ನ ತಂಗಿ ಲಕ್ಷ್ಮಿಯೂ ವಾಸಿಸುತ್ತಿದ್ದೇವೆ. ನಾನು ಲೀಲಾವತಿಯಂತೆ ನಟಿಸುತ್ತೇನೆ. ನಿಮ್ಮ ಪ್ರೇಮವೆಲ್ಲ ನನ್ನಮುಂದೆ ತೋಡಿಕೊಂಡರೆ, ನಿಮಗೊಂದು ರೀತಿ ತೃಪ್ತಿಯಾದೀತು" ಎಂದಳು ಲೀಲಾವತಿ. ಮಕರಾಂಕನು ಅದೇರೀತಿ ಮಾಡುತ್ತಿದ್ದನು. ಇದರಿಂದ ಅವನಿಗೆ ತುಸವಾದರೂ ಸಂತೃಪ್ತಿಯಾಗಲಿಲ್ಲ. ಆದರೆ ಲೀಲಾವತಿಗೆಮಾತ್ರ ಅತ್ಯಾನಂದವಾಗುತಿತ್ತು. ಅವನ ಮಾತುಗಳೆಲ್ಲ ತನ್ನನ್ನು ಕುರಿತೇ ಆಡುತ್ತಿರುವ ವಿಷಯ ಆಕೆಗೆ ತಿಳಿದಿದೆ. ಮಾಲತಿ ಸಹ ಇವರ ಈ ಬಗೆಯ ನಾಟಕ ನೋಡಿ ಸಂತೋಷದಿಂದ ಕಿರುನಗೆ ಬೀರುವಳು.

ಲೀಲಾವತಿಯ ತಂದೆ ಜಯಸಿಂಹನಿದ್ದ ಸ್ಥಳ ರಾಜಕುಮಾರಿಯರಿಗೆ ಮಕರಾಂಕನಿಂದ ತಿಳಿಯಿತು. ಒಂದು ದಿನ ಲೀಲಾವತಿ ತನ್ನ ಛದ್ಮವೇಷದಿಂದಲೇ ತಂದೆಯನ್ನು ಕಾಣಲು ಅಡವಿಗೆ ಹೋದಳು. ಇಬ್ಬರ ನಡುವೆ





ಈ ರೀತಿಯಾಗಿ ಸಂಭಾಷಣೆ ನಡೆಯಿತು. "ಮಗೂ, ನಿನ್ನ ತಂದೆ ತಾಯಿಗಳು ಯಾರು?" ಎಂದು ಜಯಸಿಂಹನು ಕೇಳಿದನು.

"ನಾನು ಉನ್ನತವಂಶದಲ್ಲಿ ಜನಿಸಿದ್ದೇನೆ" ಎಂದು ಸಮಾಧಾನಕೊಟ್ಟಳು ಲೀಲಾವತಿ. ಆದರೆ ಆಕೆ ತನ್ನ ನಿಜ ವಿಷಯವನ್ನು ತಿಳಿಸದೆಯೇ ಮೆಲ್ಲನೇ ಅಲ್ಲಿಂದ ಜಾರಿಕೊಂಡಳು.

ಇನ್ನೊಂದು ದಿನ ಮಕರಾಂಕನು ಅಡವಿಯಲ್ಲಿದ್ದ ರೈತನ ಗುಡಿಸಲಿಗೆ ಹೋಗುತ್ತಿರಲು ದಾರಿಯಲ್ಲಿ ಅವನಿಗೆ ಯಾರೋ ಒಂದು ವ್ಯಕ್ತಿ ಪೊದೆಗಳ ನಡುವೆ ಮಲಗಿರುವುದು ಕಾಣಿಸಿತು. ಆ ವ್ಯಕ್ತಿಯ ಕಡೆ ಹರಿದುಹೋಗುತ್ತಿದ್ದ ಸರ್ಪವೊಂದು ಮಕರಾಂಕನು ಬರುವ ಸದ್ದು ಕೇಳಿ ಸರಸರನೆ ಪೊದೆಯುಸಂದನ್ನು ಹೊಕ್ಕಿತು. ಅದನ್ನು ನೋಡುತ್ತಿದ್ದ ಮಕರಾಂಕನು ಪೊದೆಯೊಳಗೊಂದು ಹೆಣ್ಣು ಸಿಂಹವಿರುವುದನ್ನು ಕಂಡನು. ಅದು ಪೊದೆಯಲ್ಲಿ ಹೊಂಚಿಕೊಂಡಿದ್ದು ಮಲಗಿದ್ದ ಮನುಷ್ಯನ ಕಡೆ ತದೇಕದೃಷ್ಟಿಯಿಂದ ನೋಡುತ್ತಿತ್ತು. ಆ ಮನುಷ್ಯನು ತುಸ ಕದಲಿದರೆ ಸಾಕು, ಮೇಲೆ ಬಿದ್ದು ಕೊಲ್ಲಬೇಕೆಂದು ಅದರ ಉದ್ದೇಶ. ಸಾಮಾನ್ಯವಾಗಿ ಸಿಂಹಗಳು ಕದಲದ ಪ್ರಾಣಿಗಳನ್ನೂ, ಶವಗಳನ್ನೂ ಮುಟ್ಟುವುದಿಲ್ಲ.

ಕೂದಲೆಳೆಯಷ್ಟರಲ್ಲಿ ಹಾವಿನ ಗಂಡಾಂತರದಿಂದ ತಪ್ಪಿಸಿಕೊಂಡು ಈಗ ಸಿಂಹದ ಬಾಯಿಗೆ ತುತ್ತಾಗಲು ಸಿದ್ಧವಾಗಿದ್ದ ವ್ಯಕ್ತಿಯನ್ನು ನೋಡುವ ಕುತೂಹಲವಾಯಿತು. ಅವನು ಆತುರದಿಂದ ತುಸಬಾಗಿ ನೋಡಲು ಆ ವ್ಯಕ್ತಿ ಮತ್ತೆ ಯಾರೂ ಅಲ್ಲ, ತನ್ನ ಅಣ್ಣ ಶಶಾಂಕನೆಂದು ತಿಳಿಯಿತು. "ನನ್ನನ್ನು ಕೋಣೆಯಲ್ಲಿ ಕೂಡಿಹಾಕಿ ಬೆಂಕಿ ಹಚ್ಚಲೆಣಿಸಿದ್ದ ಈ ದುರುಳನು ಸಿಂಹದ ಬಾಯಿಗೆ ತುತ್ತಾಗಲಿ" ಎಂದು ಮಕರಾಂಕನು ಒಂದು ಕ್ಷಣ ಯೋಚಿಸಿದನು. ಆದರೆ ಮರುಕ್ಷಣವೇ ತನ್ನ ಅಣ್ಣನ ಪ್ರಾಣವನ್ನು ಕಾಪಾಡಬೇಕೆನಿಸಿತು. ಅವನು ಕತ್ತಿಹಿರಿದು ಸಿಂಹದಮೇಲೆ ಬಿದ್ದು ಅದನ್ನು ಕೊಂದುಹಾಕಿದನು. ಆದರೆ ಸಿಂಹವೂ ಸುಮ್ಮನೆ ಬಿಡಲಿಲ್ಲ. ತನ್ನ ಪಂಜಾದಿಂದ ಅವನ ಕೈಯನ್ನು ಬಲವಾಗಿ ಪರಚಿತು.

ಮಕರಾಂಕನು ಸಿಂಹದೊಂದಿಗೆ ಕಾದಾಡುತ್ತಿರುವಾಗ ಶಶಾಂಕನಿಗೆ ಎಚ್ಚರವಾಯಿತು.



ತನ್ನ ಪ್ರಾಣ ಕಾಪಾಡಲು ತಮ್ಮನು ಮಾಡು ತ್ತಿದ್ದ ಸಾಹಸವನ್ನು ಕಂಡು ಅವನಿಗೆ ನಾಚಿಕೆ ಯಾಯಿತು. ಸಿಂಹವು ಸತ್ತು ಕೆಳಗೆ ಬಿದ್ದ ನಂತರ ಅವನು ತಮ್ಮನನ್ನು ಅಪ್ಪಿಕೊಂಡು "ನಾನು ನಿನಗೆ ದ್ರೋಹ ಬಗೆದಿದ್ದರೂ ನೀನು ನನ್ನ ಪ್ರಾಣವನ್ನು ಕಾಪಾಡಿದೆ. ನನ್ನನ್ನು ಕ್ಷಮಿಸು, ತಮ್ಮಾ" ಎಂದ.

ಮಕರಾಂಕನ ಕೈಯಿಂದ ಬಹಳ ರಕ್ತ ಸೋರಿ, ಅವನು ತುಂಬಾ ನಿಶ್ಶಕ್ತನಾದನು. ಅವನು ಶಶಾಂಕನೊಂದಿಗೆ "ಅಣ್ಣಾ, ಈ ದಾರಿಯಲ್ಲೇ ಹೋದರೆ ಒಂದು ಗುಡಿಸಲು ಕಾಣಿಸುವುದು. ಅಲ್ಲಿ ಪುಷ್ಕರನೆಂಬ ಯುವಕನಿದ್ದಾನೆ. ಅವನು ನನ್ನ ಪ್ರಿಯ ಮಿತ್ರ. ತಮಾಷೆಗೆ ಅವನು ನನ್ನ ಪ್ರೇಯಸಿ ಲೀಲಾವತಿಯಂತೆ ಅಭಿನಯಿಸುವನು. ನೀನು ಹೋಗಿ ಅವನೊಂದಿಗೆ ನನ್ನ ವಿಷಯ ತಿಳಿಸು ವೆಯಾ?" ಎಂದ.

ಶಶಾಂಕನು ತಕ್ಷಣ ದಾವುಗಾಲು ಹಾಕುತ್ತ ಗುಡಿಸಲಿಗೆ ಹೋಗಿ, ಪುಷ್ಕರ ಮತ್ತು ಲಕ್ಷ್ಮಿ ಯೊಂದಿಗೆ ಮಕರಾಂಕನು ಗಾಯಗೊಂಡ ವಿಷಯವನ್ನು ತಿಳಿಸಿದನು. ತಾನು ಮಕ ರಾಂಕನ ಅಣ್ಣ ಶಶಾಂಕನೆಂದೂ, ಒಮ್ಮೆ ಭ್ರಾತೃದ್ರೋಹಕ್ಕೆ ತಲೆ ಹಾಕಿದುದರಿಂದಲೇ ಮಕರಾಂಕನು ಅರಣ್ಯದಪಾಲಾಗ ಬೇಕಾಯಿ ತೆಂದೂ ತನಗೀಗ ಬುದ್ಧಿ ಬಂದು, ಹೃದಯ ಪರಿವರ್ತನೆಯಾಗಿದೆ ಎಂದೂ ಹೇಳಿದನು. ಶಶಾಂಕನ ಬೇಗುದಿಯನ್ನು ಕಂಡು



ಮಾಲತಿ ಬೆಣ್ಣೆಯಂತೆ ಕರಗಿಹೋದಳು. ಅವಳು ಅವನ ಬಾಧೆಯನ್ನು ಕೇಳಿ ಸಾಹಾನುಭೂತಿ ತೋರಿಸಿದಳು. ಕೂಡಲೇ ಅವರಿಬ್ಬರ ನಡುವೆ ಪ್ರೇಮವೇರ್ಪಟ್ಟಿತು.

ಈ ಸಂದರ್ಭದಲ್ಲಿ ಮತ್ತೊಂದು ವಿಚಿತ್ರ ನಡೆಯಿತು. ಮಕರಾಂಕನನ್ನು ಸಿಂಹವು ಪರ ಚಿತೆಂಬ ವಿಷಯ ತಿಳಿದಕೂಡಲೇ ಲೀಲಾವತಿ ಸ್ಮೃತಿ ತಪ್ಪಿ ಬಿದ್ದುಬಿಟ್ಟಳು. ಸ್ಮೃತಿ ಬಂದ ನಂತರ ತನ್ನ ದೌರ್ಬಲ್ಯವನ್ನು ಮುಚ್ಚಿಡಲು "ಮಕರಾಂಕನ ಪ್ರೇಯಸಿಯಂತೆ ಅಭಿನ ಯಿಸುವ ಅಭ್ಯಾಸವಾದುದರಿಂದ, ಈ ವಿಷಯ ಕೇಳಿದ ಕೂಡಲೇ ಮೂರ್ಛೆ ಬಂದಂತೆ ಅಭಿ ನಯಿಸಿದೆ" ಎಂದು ಆಕೆ ಶಶಾಂಕನೊಂದಿಗೆ ಹೇಳಿದಳು. ಆದರೆ ಬಿಳಿಚಿಕೊಂಡ ಪುಷ್ಕರನ





ಮುಖ ನೋಡಿದರೆ ಆ ಮೂರ್ಛೆ ನಟನೆಯಂತೆ ಶಶಾಂಕನಿಗೆ ತೋರಲಿಲ್ಲ.

ಅವನು ತನ್ನ ತಮ್ಮನಿದ್ದ ಸ್ಥಳಕ್ಕೆ ಹೋಗಿ ಗುಡಿಸಲಿನಲ್ಲಿ ನಡೆದ ವಿಷಯವನ್ನು, ಪುಷ್ಕರನು ಮೂರ್ಛೆಗೊಂಡುದುದನ್ನೂ ತಿಳಿಸಿ "ಆ ಹುಡುಗಿ ಲಕ್ಷ್ಮಿ ಇದ್ದಾಳಲ್ಲಾ ಅವಳನ್ನು ನಾನು ಪ್ರೇಮಿಸುತ್ತೇನೆ. ನಾನಾಕೆಯನ್ನು ವಿವಾಹವಾಗಿ ಆ ಗುಡಿಸಲಿನಲ್ಲಿರಲು ನಿಶ್ಚಯಿಸಿದ್ದೇನೆ. ನೀನು ಊರಿಗೆ ಹೋಗಿ ನಮ್ಮ ಆಸ್ತಿಯನ್ನೆಲ್ಲಾ ಸ್ವಾಧೀನಪಡಿಸಿಕೊಂಡು ಸುಖವಾಗಿರು. ನನಗೆ ಅವುಗಳ ಅಗತ್ಯವಿಲ್ಲ" ಎಂದ.

"ಹಾಗಾದರೆ ನಾಳೆಯೇ ನಿಮ್ಮ ವಿವಾಹ ನಡೆಯುವಂತೆ ಪ್ರಯತ್ನಿಸುವೆನು. ಆದೇ ಅಲ್ಲಿ ಪುಷ್ಕರನು ಬರುತ್ತಿದ್ದಾನೆ. ಮನೆಯಲ್ಲಿ ಲಕ್ಷ್ಮಿಯೊಬ್ಬಳೇ ಇರುತ್ತಾಳೆ. ನೀನು ಹೋಗಿ ಅವಳನ್ನು ಮದುವೆಗೆ ಒಪ್ಪಿಸು. ಜಯಸಿಂಹನ ಸಮಕ್ಷಮದಲ್ಲೇ ವಿವಾಹ ನಡೆಯಲಿ" ಎಂದು ಹೇಳಿದ ಮಕರಾಂಕ.

ಶಶಾಂಕನು ಹೊರಟುಹೋದನಂತರ ಮಕರಾಂಕನು ಲೀಲಾವತಿಯೊಂದಿಗೆ ತನ್ನ ಸಹೋದರನು ಲಕ್ಷ್ಮಿಯನ್ನು ಪ್ರೇಮಿಸಿ ವಿವಾಹವಾಗಲು ಸಿದ್ಧನಾಗಿರುವ ವಿಷಯವನ್ನು ತಿಳಿಸಿದನು. "ಈ ಮದುವೆಯೊಂದಿಗೆ ನನ್ನ ಮತ್ತು ಲೀಲಾವತಿಯರ ವಿವಾಹವಾದರೆ ಎಷ್ಟು ಸೊಗಸಾಗಿರುತ್ತಿತ್ತು!" ಎಂದನು.

ನಿನಗೆ ನಿಜವಾಗಿ ಲೀಲಾವತಿಯಮೇಲೆ ಅಷ್ಟೊಂದು ಪ್ರೇಮವಿದ್ದರೆ ನಾಳೆ ಬೆಳಗ್ಗೆ ಆಕೆಯನ್ನು ನಾನಿಲ್ಲಿಗೆ ಕರೆತರುತ್ತೇನೆ. ಅಷ್ಟೇ ಅಲ್ಲ, ಆಕೆ ನಿನ್ನನ್ನು ವಿವಾಹವಾಗಲೂ ಒಪ್ಪಿಕೊಳ್ಳುವಂತೆ ಮಾಡುತ್ತೇನೆ. ನನಗೆ ಅಷ್ಟೋ ಇಷ್ಟೋ ಮಂತ್ರವಿದ್ಯೆ ಬರುತ್ತಿದೆ" ಎಂದಳು ಲೀಲಾವತಿ. ಒಂದುಕಡೆ ಆಶೆ, ಮತ್ತೊಂದುಕಡೆ ಅನುಮಾನ ಮಕರಾಂಕನನ್ನು ಬಾಧಿಸಿತು. "ಇದು ಪರಿಹಾಸ್ಯಕ್ಕೆ ಸಮಯವಲ್ಲ. ನಿಜ ಹೇಳು" ಎಂದ ಮಕರಾಂಕ.

"ಇದರಲ್ಲಿ ಪರಿಹಾಸ್ಯವೇನಿಲ್ಲ. ನಾನು ನಿಜ ಹೇಳುತ್ತಿದ್ದೇನೆ. ನೀನು ಉತ್ತಮ ಉಡುಪುಗಳನ್ನು ಧರಿಸಿಕೊಂಡು ಮದುಮಗನಂತೆ ಕುಳಿತಿರು. ಅಗತ್ಯವೆನಿಸಿದರೆ ಜಯಸಿಂಹ ಮತ್ತೆ ಇತರರಿಗೂ ತಿಳಿಸು. ನಾಳೆ ಬೆಳಗ್ಗೆ

ಲೀಲಾವತಿ ಇಲ್ಲಿರುವಂತೆ ಮಾಡುವ ಬಾಧ್ಯತೆ ನನ್ನದು, ಸರಿಯೇ" ಎಂದಳು ಲೀಲಾವತಿ.

ಮಾರನೇಯ ದಿನ ಮುಂಜಾನೆ ಜಯ ಸಿಂಹನ ಸಮಕ್ಷಮದಲ್ಲಿ ಎರಡು ವಿವಾಹಗಳು ನಡೆಯಲು ಸಿದ್ಧತೆಗಳಾದುವು. ಲಕ್ಷ್ಮಿ, ಶಶಾಂಕ ಮತ್ತು ಮಕರಾಂಕರು ಆತನಿದ್ದ ಸ್ಥಳಕ್ಕೆ ಬಂದರು. ಜಯಸಿಂಹನ ಪರಿವಾರ ಒಬ್ಬಳೇ ಮದುಮಗಳು ಇರುವುದನ್ನು ಕಂಡು ಅಚ್ಚರಿಗೊಂಡರು. ಪುಷ್ಕರನು ಲೀಲಾವತಿ ಯನ್ನು ಕರೆತರುವನೆಂದು ಮಕರಾಂಕನು ಹೇಳಿದನು. ಬರಲಿರುವ ಮದುಮಗಳು ತನ್ನ ಮಗಳೆಂದು ತಿಳಿದು ಜಯಸಿಂಹನು ಮತ್ತಷ್ಟು ಆಶ್ಚರ್ಯಹೊಂದಿದನು.

"ಪುಷ್ಕರನು ನಿನ್ನನ್ನು ಪರಿಹಾಸ್ಯ ಮಾಡಲು ಹಾಗೆ ಹೇಳಿರಬೇಕು. ನನ್ನ ಮಗ ಳನ್ನು ಕರೆತರಲು ಅವನಿಂದಾಗದು" ಎಂದ ಜಯಸಿಂಹ ಮಕರಾಂಕನೊಂದಿಗೆ.

ಇಷ್ಟರಲ್ಲಿ ಪುಷ್ಕರನು ಅಲ್ಲಿಗೆ ಬಂದು ಜಯ ಸಿಂಹನೊಂದಿಗೆ "ನಾನು ನಿಮ್ಮ ಮಗಳನ್ನು ಇಲ್ಲಿಗೆ ಕರೆ ತಂದ ಪಕ್ಷಕ್ಕೆ ಆಕೆಯನ್ನು ಮಕ ರಾಂಕನು ವಿವಾಹವಾಗಲು ಅನುಮತಿ ನೀಡು ವಿರಾ?" ಎಂದು ಕೇಳಿದ.

"ಅಗತ್ಯವಾಗಿ ಅನುಮತಿ ಕೊಡುತ್ತೇನೆ. ರಾಜ್ಯವಿದ್ದಿದ್ದರೆ ವರದಕ್ಷಿಣೆಯಾಗಿ ಕೊಡುತ್ತಿದ್ದೆ" ಎಂದ ಜಯಸಿಂಹ. "ಆಕೆಯನ್ನು ವಿವಾಹ ವಾಗುವುದು ನಿನಗೆ ಸಮ್ಮತವಷ್ಟೇ?" ಪುಷ್ಕ ರನು ಮಕರಾಂಕನನು ನೋಡಿ ಕೇಳಿದ.



"ನಾನು ಸಾರ್ವಭೌಮನಾದರೂ ಆಕೆ ಯನ್ನು ಮನಸ್ಫೂರ್ತಿಯಾಗಿ ಮದುವೆಯಾಗು ವೆನು" ಎಂದ ಮಕರಾಂಕ.

ತರುವಾಯ ಪುಷ್ಕರನೂ ಲಕ್ಷ್ಮಿಯೂ ತಮ್ಮ ಗುಡಿಸಲಿಗೆ ಹೋದರು. ಲೀಲಾವತಿ ತನ್ನ ಪುರುಷವೇಷವನ್ನು ತೊರೆದಳು. ಇಬ್ಬರೂ ತಾವು ತಂದುಕೊಂಡಿದ್ದ ಅಮೂಲ್ಯವಸ್ತ್ರಾ ಭರಣಗಳನ್ನು ಧರಿಸಿದರು. ಅವರು ರಾಜ ಕುಮಾರಿಯರಂತೆ ಸಿದ್ಧರಾದರು. ಅವರು ಜಯಸಿಂಹನಿದ್ದ ಸ್ಥಳಕ್ಕೆ ಬಂದರು. ಲೀಲಾ ವತಿ ತಂದೆಗೆ ಪ್ರಣಾಮಮಾಡಿ ತನ್ನನ್ನು ಆಶೀರ್ವಾದಮಾಡುವಂತೆ ಕೇಳಿಕೊಂಡಳು. ಆಕೆ ತನ್ನ ತಂದೆಗೆ ತಮ್ಮ ಅಜ್ಞಾತವಾಸದ ಕಥೆ ಯಾವತ್ತೂ ತಿಳಿಸಿದಳು.

ತರುವಾಯ ಲೀಲಾವತಿಯನ್ನು ಮಕರಾಂಕನೂ, ಮಾಲತಿಯನ್ನು ಶಶಾಂಕನೂ ವಿವಾಹವಾದರು. ಈ ವಿವಾಹಗಳು ನಗರದಲ್ಲಿ ನಡೆದಿದ್ದರೆ ಬಹಳ ವಿಜೃಂಭಣೆಯಾಗಿ ನಡೆಯಬೇಕಾಗಿದ್ದರೂ ಇಲ್ಲಿ ಅರಣ್ಯದಲ್ಲಿ ಆನಂದಕ್ಕೆಮಾತ್ರ ಯಾವ ಕೊರತೆಯೂ ಇರಲಿಲ್ಲ. ವಿವಾಹ ಶಾಸ್ತ್ರಮುಗಿದನಂತರ ಎಲ್ಲರೂ ಎಲೆಗಳಮುಂದೆ ಕುಳಿತು ಊಟಮಾಡುತ್ತಿರುವಾಗ ಶಕ್ತಿಸಿಂಹನು ಕೆಲವಾರು ಭಟರೊಂದಿಗೆ ಅಲ್ಲಿಗೆ ಬಂದನು.

ತನ್ನ ಮಗಳು ಮಾಲತಿ ಮಾಯವಾದಾಗಲಿಂದ ಶಕ್ತಿಸಿಂಹನ ಕೋಪ ನೆತ್ತಿಗೇರಿತು. ದಿಕ್ಕಿಲ್ಲದೆ ಅಡವಿಪಾಲಾದ ತನ್ನ ಅಣ್ಣನಬಳಿಗೆ ತನ್ನ ಮಗಳು ಏಕೆ ಹೋಗಬೇಕು? ಜಯಸಿಂಹ ಮತ್ತು ಅವನ ಸಂಗಡಿಗರ ಸರ್ವನಾಶ ಮಾಡುವ ಉದ್ದೇಶದಿಂದಲೇ ಅವನು ಅಲ್ಲಿಗೆ ದಾಳಿ ತೆಗೆದುಕೊಂಡು ಬಂದನು.

ಆದರೆ ನೂತನ ವಧೂವರರನ್ನು, ಔತಣ ಕೂಟದಲ್ಲಿ ಭಾಗವಹಿಸಿದ್ದ ಪರಿಜನರನ್ನು ಕಂಡ ಕೂಡಲೇ ಶಕ್ತಿಸಿಂಹನಿಗೆ ಜ್ಞಾನೋದಯವಾಯಿತು. ಅರಣ್ಯದ ನಡುವೆಯೂ ಆನಂದಕ್ಕೆ ಕೊರತೆಯಿರಲಾರದೆಂದೂ, ಕಿರೀಟವಿದ್ದ ಮಾತ್ರಕ್ಕೆ ರಾಜನಾಗಲಾರನೆಂದೂ, ತನ್ನ ಅಣ್ಣನಾದ ಜಯಸಿಂಹನು ಎಲ್ಲಿದ್ದರೂ ರಾಜನೆಂದೂ ಶಕ್ತಿಸಿಂಹನು ಗ್ರಹಿಸಿದನು. ಅವನು ತನ್ನ ಅಣ್ಣನ ಪಾದಗಳಮೇಲೆ ಬಿದ್ದು ಕ್ಷಮಾಪಣೆ ಬೇಡಿಕೊಂಡನು. "ಅಣ್ಣಾ, ನಡೆದುದೇನೋ ನಡೆದು ಹೋಯಿತು. ನೀನಿಲ್ಲದ ರಾಜ್ಯ ಅರಣ್ಯವಾಗಿದೆ, ನೀನಿರುವ ಅರಣ್ಯ ರಾಜ್ಯ ವಾಗಿದೆ. ಆದುದರಿಂದ ನೀನು ಮತ್ತೆ ಬಂದು ರಾಜ್ಯಭಾರ ಮಾಡು" ಎಂದನು.

ಅವನ ಮಾತು ಕೇಳಿ ಅಲ್ಲಿದ್ದವರೆಲ್ಲ ಹರ್ಷಿತರಾದರು. ಜಯಸಿಂಹನ ಅರಣ್ಯವಾಸ ಅಂದಿಗೆ ಮುಗಿಯಿತು. ತಮ್ಮ ಪದವಿಗಳನ್ನು ತ್ಯಜಿಸಿ ತನ್ನೊಂದಿಗೆ ಅರಣ್ಯಕ್ಕೆ ಬಂದು ಸೇವೆಸಲ್ಲಿಸಿದ ಸಾಮಂತರಿಗೆ ತನ್ನ ಮೆಚ್ಚಿಗೆಯನ್ನು, ಆದರವನ್ನು ಧಾರಾಳವಾಗಿ ತೋರಿಸಿದನು ಮಹಾರಾಜ ಜಯಸಿಂಹ. ಎಲ್ಲರೂ ತಮ್ಮ ತಮ್ಮ ಪದವಿಗಳನ್ನು ಮತ್ತೆ ಸ್ವೀಕರಿಸಿಕೊಂಡು ಸುಖವಾಗಿ ಬಾಳತೊಡಗಿದರು.






## 15

[ಧೀರಮತಿ ತನ್ನ ಮನೆಗೆ ಹಿಂತಿರುಗಿ ಬಂದು ತಾಯಿಯೊಂದಿಗೆ ಸಕಲ ವಿಷಯಗಳನ್ನು ತಿಳಿಸಿದನಾದರೂ ತನ್ನ ತಂದೆಯ ಸಂಗತಿ ಹೇಳಲಿಲ್ಲ ಅವನೊಂದಿಗೆ ಪೈಲಾಸ್‌ನಿಂದ ಬಂದ ಒಬ್ಬ ಜ್ಞಾನಿ ಅಂದು ಅವನ ಅತಿಥಿಯಾದನು. ಅತಿಥಿ ಭೋಜನ ಮುಗಿದ ನಂತರ ರೂಪಧರನ ಮನೆಯಲ್ಲಿ ಸೇರಿ ಹಾವಳಿ ಮಾಡುತ್ತಿದ್ದ ದುರುಳರು ಊಟವನ್ನು ಪ್ರಾರಂಭಿಸಿದರು. ಆಗ ರೂಪಧರನು ವೃದ್ಧ ಬಿಕ್ಷುಕನ ವೇಷದಲ್ಲಿ ಅಲ್ಲಿಗೆ ಬಂದು, ಧೀರಮತಿ ಕೊಟ್ಟ ಆಹಾರ ತಿಂದು, ಎಲ್ಲರ ಮುಂದೆ ಹೋಗಿ ಕೈಯೊಡ್ಡಲಾರಂಭಿಸಿದನು.]

ರೂಪಧರನ ಮನೆಯಲ್ಲಿ ಊಟ ಮಾಡುತ್ತಿದ್ದ ಆ ದುರ್ಮಾರ್ಗರಿಗೆ ಆ ವೃದ್ಧನನ್ನು ಕಂಡು ಬಹಳ ಮರುಕವುಂಟಾಯಿತು. ಅವರು ತಮ್ಮ ಕೈಗೆ ದೊರಕಿದುದನ್ನು ಅವನಿಗೆ ನೀಡಿದರು. "ಈ ಮುದುಕನು ಯಾರು? ಎಲ್ಲಿಂದ ಬಂದ?" ಎಂದು ಕೆಲವರು ಕೇಳಿದರು.

ಅಲ್ಲೇ ಇದ್ದ ಕುರುಬಕಾಳನು "ಸ್ವಾಮಿ, ಈ ಮುದುಕನನ್ನು ನಾನು ದಾರಿಯಲ್ಲಿ ಕಂಡೆ. ಹಂದಿಚೇಕನು ತನ್ನ ಸಂಗಡ ಅವನನ್ನು ಕರೆದುಕೊಂಡು ಬಂದಿರುವನು" ಎಂದ.

ದುರ್ಬುದ್ಧಿ ಹಂದಿಚೇಕನೊಂದಿಗೆ "ಈ ನಗರದಲ್ಲಿ ಉಂಡಾಡಿಗಳು ಕಡಿಮೆಯೆಂದು ಈ ಮುದಿಗೂಬೆಯನ್ನು ಕರೆತಂದೆಯಾ? ನಿಮ್ಮ ಯಜಮಾನನ ಸೊತ್ತನ್ನು ತಿಂದು ತೀರಿಸಲಿಕ್ಕೆ ಬಿಕ್ಷುಕರು ಕಡಿಮೆಯಾಗಿತ್ತಲ್ಲವೇ?" ಎಂದು ಕೆಣಕಿದನು.

---

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ

---



ಯಲು ಸಾಧ್ಯವಿಲ್ಲ. ನನ್ನ ಮಾತು ಕೇಳು. ಒಂದಿಷ್ಟು ದಾನಮಾಡು. ನಿನಗೆ ತಿನ್ನುವುದರಲ್ಲಿರುವ ಆಸಕ್ತಿ ಅನ್ಯರಿಗೆ ನೀಡುವುದರಲಿಲ್ಲ" ಎಂದು ಚುಚ್ಚಿ ನುಡಿದನು.

"ಎಲಯೆಲಾ, ದೊಡ್ಡ ಉಪನ್ಯಾಸವನ್ನೇ ಕೊಟ್ಟುಬಿಟ್ಟೆ. ನಾನು ಈ ಮುದುಕನಿಗೆ ಕೊಡುವುದನ್ನು ಇತರರೂ ಕೊಟ್ಟರೆ ಮತ್ತೆಂದೂ ಇವನು ಇತ್ತಕಡೆ ಬರುವುದಿಲ್ಲ" ಎಂದು ಹೇಳಿ ದುರ್ಬುದ್ಧಿ ಮೇಜಿನ ಕೆಳಗಿದ್ದ ಒಂದು ಪೀಠವನ್ನು ಕೈಗೆ ತೆಗೆದುಕೊಂಡನು.

ಇಷ್ಟರಲ್ಲಿ ರೂಪಧರನು ಸಿಕ್ಕಿದ ಅಷ್ಟೋ ಇಷ್ಟೋ ತನ್ನ ಜೋಳಿಗೆಯಲ್ಲಿ ತುಂಬಿಕೊಂಡು, ದುರ್ಬುದ್ಧಿಯನ್ನು ಸಮೀಪಿಸಿ "ಅಯ್ಯಾ, ಇವರೆಲ್ಲರಿಗಿಂತಲೂ ತಾವು ಗಣ್ಯರಂತೆ ತೋರುವಿರಿ. ಆದುದರಿಂದ ತಾವು ಹೆಚ್ಚು ಧರ್ಮ ನೀಡಬೇಕು. ನಾನೂ ಒಂದಾನೊಂದು ಕಾಲದಲ್ಲಿ ಚೆನ್ನಾಗಿ ಬಾಳಿ ಬದುಕಿದವನು. ನನ್ನ ಕೈ ಕೆಳಗೆ ಸಾವಿರಾರು ಕೆಲಸಗಾರರಿದ್ದರು. ಆದರೆ ದೇವತೆಗಳು ನನ್ನ ಮೇಲೆ ಕುಪಿತರಾಗಿ ನನ್ನನ್ನು ಕಡಲು ಪ್ರಯಾಣಕ್ಕೆ ಕಳುಹಿಸಿದರು. ನಾನು ಕಡಲಗಳ್ಳರ ಜೊತೆ ಸೇರಿದೆ. ಈಜಿಪ್ಟಿನಲ್ಲಿ ನನ್ನ ಸಂಗಡಿಗರೆಲ್ಲ ಹತರಾದರು. ನಾನು ದಿಕ್ಕಿಲ್ಲದವನಾದೆ. ಹೀಗೆ ಅಲೆದಾಡುತ್ತಿದ್ದೇನೆ." ಎಂದನು.

"ಏನಿದು ಪೀಡೆ. ಹಾಯಾಗಿ ಊಟ ಮಾಡಲೂ ಅವಕಾಶವಿಲ್ಲವಲ್ಲಾ. ಛೆ, ದೂರ

"ಸ್ವಾಮಿ, ಯಾರಾದರು ಬಿಕ್ಷುಕರನ್ನು ಬೇಕೆಂದು ಕರೆದುಕೊಂಡು ಬರುತ್ತಾರೆಯೇ? ಸರಿ ನಿಮ್ಮೊಂದಿಗೆ ಚರ್ಚೆಯೇಕೆ? ನಮ್ಮ ಯಜಮಾನಿ ಮತ್ತು ಚಿಕ್ಕ ಯಜಮಾನರ ವಿಶ್ವಾಸವಿದ್ದರೆ ಅದಷ್ಟೇ ನನಗೆ ಸಾಕು" ಎಂದ ಹಂದಿಚೇಕ.

ಧೀರಮತಿ ಹಂದಿಚೇಕನೊಂದಿಗೆ "ಏಕೆ ಈ ಅನವಸರ ಚರ್ಚೆ. ಆತನು ಯಾವಾಗಲೂ ಅಷ್ಟೇ. ಆತನನ್ನು ಕಂಡು ಇತರರೂ ಸಹ ಹಗುರವಾಗಿ ಮಾತನಾಡುವುದನ್ನು ಕಲಿಯುತ್ತಿರುವರು" ಎಂದು ಹೇಳಿ, ದುರ್ಬುದ್ಧಿಯ ಕಡೆ ತಿರುಗಿ "ನಮ್ಮ ಪ್ರತಾಪವನ್ನು ಆ ಹಣ್ಣು ಮುದುಕನ ಮೇಲೆ ತೋರಿಸಬೇಕೆಂತಲೋ ನಿನ್ನ ಸಲಹೆ? ನಾನಿಲ್ಲಿರುವ ತನಕ ಹಾಗೆ ನಡೆ



ನಿಲ್ಲು. ನೀನೊಬ್ಬ ಬಿಕ್ಷುಕ. ಆದರೂ ನಿನಗೆಷ್ಟು ಅಹಂಕಾರ! ಮತ್ತೆ ನಿನ್ನನ್ನು ಈಜಿಪ್ಟಿಗೆ ಕಳುಹಿಸಿಬಿಟ್ಟೇನು ಜಾಗ್ರತೆ! ಉಳಿದವರು ಕೊಡದೇನು ಮಾಡುತ್ತಾರೆ. ಅವರ ಸೊತ್ತೇನು ಹೋಗುತ್ತೆ!" ಎಂದ ದುರ್ಬುದ್ಧಿ.

"ಅಯ್ಯಾ, ತಾವು ನೋಡಲು ಗಣ್ಯರಂತೆ ಕಂಡರೂ, ಬುದ್ಧಿಮಾತ್ರ ಸಂಕುಚಿತ. ನಿಮ್ಮ ಸೊತ್ತು ಅಲ್ಲದಿರುವಾಗಲೇ ಒಂದಿಷ್ಟು ದಾನ ಮಾಡಲು ಹಿಂತೆಗೆಯುತ್ತಿರುವಿರಿ. ಇನ್ನು ನಿಮ್ಮದೇ ಸೊತ್ತಾಗಿದ್ದರೆ ಒಂದು ಉಪ್ಪು ಕಣವನ್ನಾದರೂ, ಉದರಿಸುತ್ತಿರಲಿಲ್ಲವೆಂದು ತೋರುವುದು! ಒಂದು ಚೂರುರೊಟ್ಟಿ ಇತ್ತ ಎಸೆಯಬಾರದೇ?" ಎಂದು ರೂಪಧರನು ಅಲ್ಲಿಂದ ಮುಂದೆ ನಡೆದನು.

"ಎಲವೋ ತಲೆ ತಿರುಕ. ಎಷ್ಟೋ ನಿನ್ನ ಪೊಗರು?" ಎಂದು ದುರ್ಬುದ್ಧಿ ತನ್ನ ಕೈಯಲ್ಲಿದ್ದ ಪೀಠವನ್ನು ರೂಪಧರನ ಕಡೆಗೆಸೆದನು. ಅದು ರೂಪಧರನ ಬಲಭುಜಕ್ಕೆ ತಾಕಿ, ಅವನಿಗೆ ಬಲವಾದ ಪೆಟ್ಟಾಯಿತು.

ಆದರೆ ರೂಪಧರನು ಆ ಏಟಿಗೆ ಕೊಂಚವಾದರೂ ಕೊಂಕಲಿಲ್ಲ. ದುರ್ಬುದ್ಧಿಯ ಕಡೆ ಒಮ್ಮೆ ತೀವ್ರವಾಗಿ ನೋಡಿ, ಬಾಗಿಲ ಬಳಿಯಿದ್ದ ತನ್ನ ಸ್ಥಳಕ್ಕೆ ಹೋಗಿ "ಈ ಮನೆ ಯಜಮಾನಿಯನ್ನು ವಿವಾಹವಾಗ ಬಯಸುವ ಮಹನೀಯರೇ, ನನ್ನ ಮಾತು ಕೇಳಿ. ತನ್ನ ಸೊತ್ತನ್ನು ಕಾಪಾಡಿಕೊಳ್ಳುವ ಪ್ರಯತ್ನದಲ್ಲಿ ಒಬ್ಬ ಮಾನವನು ಪೆಟ್ಟು ತಿನ್ನುವುದು



ವಿಶೇಷ ಸಂಗತಿಯಲ್ಲ. ಆದರೆ ಒಬ್ಬ ವ್ಯಕ್ತಿ ಹೊಟ್ಟೆಯ ಪಾಡಿಗಾಗಿ ಪರರಿಂದ ಏಟು ಪಡೆಯುವುದೆಂದರೆ ತುಂಬಾ ಅನ್ಯಾಯ. ಬಿಕ್ಷುಕರನ್ನು ಕಾಪಾಡುವ ದೇವರು ಒಬ್ಬನು ಇದ್ದರೆ ಈ ದುರ್ಬುದ್ಧಿ ಪಟ್ಟಕ್ಕೇರುವುದಂತೂ ಸುಳ್ಳು, ಚಟ್ಟಕ್ಕೇರುವುದು ಮಾತ್ರ ನಿಜ" ಎಂದನು.

"ತಲೆ ಹರಟೆಕೊಚ್ಚದೆ ತಿನ್ನುವಂತಿದ್ದರೆ ತಿನ್ನು. ಇಲ್ಲ ಹೊರಗೆ ನಡಿ. ಎಲ್ಲರೂ ಸೇರಿ ನಿನ್ನ ಚರ್ಮ ಸುಲಿದುಬಿಟ್ಟೇವು, ಹುಷಾರ್" ಎಂದು ದುರ್ಬುದ್ಧಿ ಗದರಿದನು.

ಆ ವೃದ್ಧನೊಂದಿಗೆ ದುರ್ಬುದ್ಧಿ ನಡೆದುಕೊಂಡ ರೀತಿ ಕಂಡು ಅಲ್ಲಿದ್ದವರೆಲ್ಲಾ ಅಸಹ್ಯಪಟ್ಟುಕೊಂಡರು. "ಛೆ, ಮುದುಕನನ್ನು ಹೊಡೆಯುವುದು ತುಂಬಾ ಅನ್ಯಾಯ.





ಬಹುಶಃ ನಮ್ಮ ಯಜಮಾನರ ವಿಷಯ ಏನಾದರೂ ತಿಳಿದಿರಬಹುದು " ಎಂದಳು.

ಹಂದಿಚೇಕನು ರೂಪಧರನ ಬಳಿಗೆ ಹೋಗಿ "ನಮ್ಮ ಯಜಮಾನಮ್ಮನವರು ನಿನ್ನನ್ನು ಒಮ್ಮೆ ಬರುವಂತೆ ಹೇಳಿದರು. ನಮ್ಮ ಒಡೆಯರ ವಿಷಯ ನಿನಗೇನಾದರೂ ತಿಳಿದಿದ್ದರೆ ಕೇಳಿ ತಿಳಿಯಲಪೇಕ್ಷಿಸುವರಂತೆ " ಎಂದನು.

"ಆ ವಿಷಯ ನನಗೆ ಬಹಳ ಗೊತ್ತಿದೆ. ಆದರೆ ಇದು ಸಮಯವಲ್ಲ. ಸಂಜೆ ಯಾರೂ ಇಲ್ಲದಿರುವಾಗ ನಾನು ಭೇಟಿ ಮಾಡುವುದಾಗಿ ಹೇಳು " ಎಂದ ರೂಪಧರ.

ಹಂದಿಚೇಕನು ಪದ್ಮಮುಖಿಗೆ ಈ ಸುದ್ದಿ ಮುಟ್ಟಿಸಿ ಹಿಂತಿರುಗಿಬಂದು ಧೀರಮತಿಯೊಂದಿಗೆ "ಸಣ್ಣ ಯಜಮಾನರೇ, ಇನ್ನು ನಾನು ಹಂದಿಗಳನ್ನು ನೋಡಿಕೊಳ್ಳಲು ಹೋಗಬೇಕು. ಈ ವೃದ್ಧನನ್ನು ತುಸ ಜಾಗರೂಕತೆಯಿಂದ ನೋಡಿಕೊಳ್ಳಿ. ದುರ್ಬುದ್ಧಿ ಆತನೊಂದಿಗೆ ನಡೆದುಕೊಂಡ ರೀತಿ ನೀವೆ ನೋಡಿದಿರಲ್ಲಾ " ಎಂದನು.

"ಮುದುಕನ ವಿಷಯವಾಗಿ ನೀನು ಕಳವಳ ಪಡಬೇಡ. ನೀನುಮಾತ್ರ ಊಟ ಮುಗಿಸಿಕೊಂಡು ಹೋಗು " ಎಂದ ಧೀರಮತಿ.

ಹಂದಿಚೇಕನು ಊಟ ಮಾಡಿಕೊಂಡು ಹೋಗುವ ವೇಳೆಗೆ ಮಧ್ಯಾಹ್ನವಾಯಿತು. ಎಲ್ಲರೂ ಸಂಗೀತ ನೃತ್ಯಗಳಲ್ಲಿ ತಲ್ಲೀನರಾಗಿದ್ದರು. ಆ ಸಮಯಕ್ಕೆ ಅಲ್ಲಿಗೆ ಮತ್ತೊಬ್ಬ ಭಿಕ್ಷುಕನು ಬಂದನು. ಅವನು ನಗರದಲ್ಲಿ

ಒಂದುವೇಳೆ ಬಿಕ್ಷುಕರನ್ನು ಕಾಪಾಡುವ ದೇವರೊಬ್ಬನಿರಬಹುದು? ಒಂದೊಂದು ವೇಳೆ ದೇವತೆಗಳು ಈ ರೂಪದಲ್ಲಿ ಬರುವುದುಂಟು " ಎಂದು ತಲಾ ಒಂದೊಂದು ಮಾತನಾಡಿದರು.

ತನ್ನ ತಂದೆಗೆ ಏಟುಬೀಳಲು ಧೀರಮತಿ ಕೆರಳಿ ನಿಂತನು. ಆದರೆ ಅವನು ತನ್ನ ದುಃಖ ಮತ್ತು ಕೋಪವನ್ನು ಅತಿಪ್ರಯಾಸದಿಂದ ತಡೆದುಕೊಳ್ಳಬೇಕಾಯಿತು.

ಪಡಸಾಲೆಯಲ್ಲಿ ನಡೆದ ಅನಾಹುತ ಪದ್ಮಮುಖಿ ಮತ್ತು ಆಕೆಯ ಸಖಿಯರಿಗೆ ತಿಳಿಯಿತು. ಆಗ ಪದ್ಮಮುಖಿ ಹಂದಿಚೇಕನನ್ನು ಬಳಿಗೆ ಕರೆಯಿಸಿಕೊಂಡು "ಆ ವೃದ್ಧ ಬಿಕ್ಷುಕನನ್ನು ಇಲ್ಲಿಗೆ ಕರೆ ತರುವೆಯಾ? ಆತನು ಅನೇಕ ದೇಶಗಳಲ್ಲಿ ಸುತ್ತಾಡಿರುವನಂತೆ.







ತಿರುಪೆ ಬೇಡಿ ಜೀವಿಸುತ್ತಿದ್ದನು. ನಗರದ ವಿಶೇಷ ಸಮಾಚಾರಗಳನ್ನು ತಂದು ಮುಟ್ಟಿಸುತ್ತಿದ್ದುದರಿಂದ ಎಲ್ಲರೂ ಅವನನ್ನು ದೂತನೆಂದು ಕರೆಯುತ್ತಿದ್ದರು.

ದೂತನು ಒಳಗೆ ಪ್ರವೇಶಿಸಿ, ರೂಪಧರನನ್ನು ಕಂಡು "ಎಲೋ, ಯಾರೋ ನೀನು. ಹೊರಗೆ ಹೋಗುವೆಯಾ, ಇಲ್ಲ. ಕತ್ತು ಹಿಡಿದು ನೂಕಲೇ" ಎಂದು ಗದರಿದನು.

"ನಾನು ನಿನ್ನ ಗೋಜಿಗೆ ಬಂದೆನೇ, ನನ್ನ ಗೊಡವೆ ನಿನಗೇಕೆ? ನಿನ್ನ ಪಾಡಿಗೆ ತಿರುಪೆ ಬೇಡಿಕೋ ಹೋಗು. ನೂಕುವ ಮಾತಿಗೆ ಬಂದರೆ ವೃದ್ಧನಾದರೂ ನಾನೇ ನಿನ್ನನ್ನು ಹೊರಗೆ ದಬ್ಬಿಬಿಟ್ಟೇನು, ಹುಷಾರ್" ಎಂದು ಗಂಭೀರವಾಗಿ ನುಡಿದ ರೂಪಧರ.

"ಎಲಯೆಲಾ, ಇವನಿಗೆಷ್ಟು ಅಹಂಕಾರ? ಎಲ್ಲಿ, ಯಾರು ಶಕ್ತರೋ ನೋಡಿಯೇ ಬಿಡೋಣ. ಮುದಿತೊತ್ತೇ! ನನ್ನಂತಹ ಯುವಕನೊಂದಿಗೆ ಸವಾಲು ಹಾಕುವೆಯಾ? ಕಾಲು ಕೆರೆದು ಜಗಳಕ್ಕೆ ಬರುವೆಯಾ?" ಎಂದ ದೂತ ದರ್ಪದಿಂದ.

ಒಂದುಕಡೆ ಇಬ್ಬರು ಬಿಕ್ಷುಕರು ನಾಯಿಗಳಂತೆ ಕಚ್ಚಾಡುತ್ತಿರುವುದನ್ನು ಕಂಡು ದುರ್ಬುದ್ಧಿ ಆನಂದದಲ್ಲಿ ಮುಳುಗಿದನು. ಗೆಳೆಯರನ್ನು ಉದ್ದೇಶಿಸಿ "ಮಿತ್ರರೇ, ಇದೀಗ ಯಾರು ಗೆಲ್ಲುವರೋ ನೋಡೋಣ. ಇವರ ಬಡಿದಾಟ ನಮಗಿಂದು ಹೊಸರೀತಿಯ ವಿನೋದವಾಯಿತು, ಬಿಡಿ" ಎಂದ.




ಎಲ್ಲರೂ ಎದ್ದುಬಂದು ಬಿಕ್ಷುಕರ ಸುತ್ತಲೂ ನೆರೆದರು. "ಗೆದ್ದವರು ಇಂದು ರಾತ್ರಿ ಇಲ್ಲಿ ನಿಶ್ಚಿಂತೆಯಾಗಿ ಬೇಕಾದಷ್ಟು ತಿಂದು, ಕುಡಿಯಲು ಅವಕಾಶ ನೀಡುವೆವು. ಸೋತವರಿಗೆ ಸ್ಥಳವಿಲ್ಲ, ತಿಳಿಯಿತೇ" ಎಂದು ದುರ್ಬುದ್ಧಿ ಬಿಕ್ಷುಕರೊಂದಿಗೆ ಹೇಳಿದನು.

"ಮಹನೀಯರೇ, ಮೊದಲೇ ನಾನು ಮುದುಕ. ಯುವಕನೊಂದಿಗೆ ಹೋರಾಡಬೇಕಾಗಿದೆ. ನಿಮ್ಮಲ್ಲಿ ಯಾರೂ ನನ್ನಮೇಲೆ ಕೈಮಾಡಿಕೊಳ್ಳದಿದ್ದರೆ ಸರಿ. ಹಾಗೆಂದು ಮಾತುಕೊಡಿ" ಎಂದ ರೂಪಧರ.

ಹೋರಾಟವಾಗುವಾಗ ಯಾರಿಗೂ ಅನ್ಯಾಯ ಮಾಡುವುದಿಲ್ಲವೆಂದು ಅಲ್ಲಿದ್ದವರೆಲ್ಲ ಭರವಸೆನೀಡಿದರು. ಧೀರಮತಿ ರೂಪಧರ




ನೊಂದಿಗೆ "ಈ ಮನೆಗೆ ಒಡೆಯ ನಾನು. ಇಲ್ಲಿರುವವರೆಲ್ಲ ಗಣ್ಯಮಹನೀಯರು. ನಾವೆಲ್ಲ ನಿನಗೆ ಅನ್ಯಾಯವಾಗದಂತೆ ನೋಡಿಕೊಳ್ಳುತ್ತೇವೆ" ಎಂದು ಮಾತು ಕೊಟ್ಟನು. ತರುವಾಯ ರೂಪಧರನು ತನ್ನ ಹರಿದ ಅರಿವೆಗಳನ್ನು ಒಂದೆಡೆಯಿಟ್ಟು ಕಾಳಗಕ್ಕೆ ಸಿದ್ಧನಾದನು. ಅವನ ಬಲಿಷ್ಠವಾದ ತೊಡೆ. ತೋಳುಗಳನ್ನು ಕಂಡು ಎಲ್ಲರೂ ಚಕಿತರಾದರು. "ದೂತನ ಸಂಗತಿ ಮುಗಿಯಿತು. ಅವನು ಸಾವಿನೊಂದಿಗೆ ಸರಸವಾಡುತ್ತಿದ್ದಾನೆ" ಎಂದುಕೊಂಡರು ಕೆಲವರು.

ದೂತನ ಸ್ಥಿತಿಯಂತೂ ತುಂಬಾ ಶೋಚನೀಯವಾಗಿತ್ತು. ಅವನು ಭಯದಿಂದ ತರತರ ನಡುಗುತ್ತಿದ್ದನು. ಅವನು ಹೊಡೆದಾಟಕ್ಕೆ



ಸಿದ್ಧನಾಗಲು ನೌಕರರು ಸಹಾಯ ಮಾಡಬೇಕಾಯಿತು. ಅವನು ಪೆಚ್ಚಾಗಿ ನಿಂತಿರಲು ಉಳಿದವರು ಅವನನ್ನು ಬಲವಂತದಿಂದ ರಂಗಸ್ಥಳಕ್ಕೆ ನೂಕಿದರು. ದೂತನನ್ನು ಒಂದೇ ಏಟಿಗೆ ಸಾಯಿಸಲೇ, ಇಲ್ಲ, ಮೆಲ್ಲನೆ ಪೆಟ್ಟು ಕೊಟ್ಟು ಕೆಳಗೆ ಬೀಳಿಸಲೇ ಎಂದು ರೂಪಧರನು ಆಲೋಚಿಸುತ್ತಿದ್ದನು. 'ಕೊಂದುಬಿಟ್ಟರೆ ಇಲ್ಲಿರುವ ಪುಂಡರಿಗೆ ನನ್ನ ಮೇಲೆ ಅನುಮಾನ ಬರಬಹುದು. ಆದುದರಿಂದ ಇವನಿಗೆ ತುಸ ನನ್ನ ಕೈಚುರುಕು ತೋರಿಸಿ ಬಿಟ್ಟುಬಿಡುವುದೇ ಒಳಿತು' ಎಂದುಕೊಂಡ ರೂಪಧರ.

ಎದುರಾಳಿಗಳು ರಂಗಸ್ಥಳದಲ್ಲಿ ಎದುರುಬದುರಾಗಿ ನಿಂತುಕೊಂಡರು. ಆವೇಶದಿಂದ ದೂತನು ರೂಪಧರನ ಭುಜದಮೇಲೆ ಹೊಡೆಯಲು ಕೈಯೆತ್ತಲು, ರೂಪಧರನು ಯುಕ್ತಿಯಿಂದ ತಪ್ಪಿಸಿಕೊಂಡು, ದೂತನ ಕೊರಳಿನ ಮೇಲೆ ಬಲವಾಗಿ ಒಂದೇಟು ಕೊಟ್ಟನು. ತಕ್ಷಣ ಅವನು ಕೆಳಗೆಬಿದ್ದು ವಿಲವಿಲ ಒದ್ದಾಡತೊಡಗಿದನು. ಅವನ ಬಾಯಿಂದ ರಕ್ತ ಸುರಿಯಿತು. ಪ್ರೇಕ್ಷಕರು ಕೈಚಪ್ಪಾಳೆ ತಟ್ಟಿದರು.

ರೂಪಧರನು ದೂತನ ಕಾಲು ಹಿಡಿದು ದರದರನೆ ಎಳೆದುಕೊಂಡು ಹೋಗಿ ಗೋಡೆಗೆ ಒರಗಿಸಿ ಕೂರಿಸಿ, ಅವನ ಕೈಗೆ ಕೋಲೊಂದನ್ನು ಕೊಟ್ಟು "ನಾಯಿ ಮತ್ತು ಹಂದಿಗಳು ಒಳಗೆ ಬರದಂತೆ ನೋಡಿಕೊಳ್ಳುತ್ತಿರು. ಬಿಕ್ಷುಕರ ಚಕ್ರವರ್ತಿ ಎಂದು ಭಾವಿಸಿಕೊ. ಹೂಂ, ಇಂದು ನಿನ್ನ ಅದೃಷ್ಟ ನೆಟ್ಟಗಿತ್ತು, ಇಲ್ಲದಿದ್ದರೆ







ಈವೇಳೆಗೆ ಪರಲೋಕದಲ್ಲಿರುತ್ತಿದ್ದೆ'' ಎಂದನು. ತರುವಾಯ ಅವನು ಮತ್ತೆ ಬಾಗಿಲಬಳಿಗೆ ಬಂದು ತನ್ನ ಸ್ಥಳದಲ್ಲಿ ಕುಳಿತುಕೊಂಡನು.

ಅಂದು ಸಾಯಂಕಾಲ ಅನಿರೀಕ್ಷಿತವಾಗಿ ಪದ್ಮಮುಖಿ ತನ್ನ ದಾಸಿಯರೊಂದಿಗೆ ಪಡಸಾಲೆಗೆ ಬಂದಳು. ಆಕೆಯ ಸೌಂದರ್ಯವನ್ನು ಕಂಡು ಎಲ್ಲರೂ ತನ್ಮಯರಾದರು. ತನ್ನ ಮಗನನ್ನು ಕುರಿತು "ಧೀರಮತಿ, ನೀನೇಕೆ ಈ ಕಾಳಗಕ್ಕೆ ಅನುಮತಿನೀಡಿದೆ? ಪರಕೀಯರೊಬ್ಬರು ನಮ್ಮ ಆಶ್ರಯ ಕೋರಿ ನಮ್ಮ ಮನೆಗೆ ಬಂದಿರುವಾಗ ಆತನಮೇಲೆ ಕೈಮಾಡಲು ಅವಕಾಶ ಕೊಡುವುದು ಉಚಿತವೇ? ಆತನಿಗೆ ಏನಾದರೂ ಆಪತ್ತು ಸಂಭವಿಸಿದ್ದರೆ ನಮಗೆಷ್ಟು ಅಪ್ರತಿಷ್ಠೆಯೋ ಯೋಚಿಸಿದೆಯಾ?'' ಎಂದು ಕೇಳಿದಳು ಪದ್ಮಮುಖಿ.

"ಅಮ್ಮಾ, ನಾನೇನು ಮಾಡಲಿ? ಇವರೆಲ್ಲ ನನ್ನ ಸುತ್ತಲೂ ಸೇರಿ ನನಗೆ ಉಸಿರಾಡಲೂ ಅವಕಾಶಕೊಡುತ್ತಿಲ್ಲ. ಈಗಲಾದರೂ ಏನಾಯಿತು? ವೃದ್ಧನ ಮೇಲೆ ಕೈಮಾಡಿಕೊಂಡ ದೂತನಿಗೆ ತಕ್ಕಶಾಸ್ತಿ ಆಯಿತು'' ಎಂದ ಧೀರಮತಿ.

ಆಗ ವಿಪುಲಯೋಧನೆಂಬುವನು "ಪದ್ಮಮುಖಿ, ನಿನ್ನ ಸೌಂದರ್ಯವನ್ನು ಎಲ್ಲ ಪ್ರಜೆಗಳೂ ನೋಡಲು ಅವಕಾಶವಿದ್ದಿದ್ದರೆ, ಅವರೆಲ್ಲರೂ ಈ ಭವನಕ್ಕೆ ಬಂದುಬಿಡುತ್ತಿದ್ದರು. ಅದು ಖಂಡಿತ. ಪ್ರತಿಯೊಬ್ಬರೂ ನಿನ್ನನ್ನು ಮದುವೆಯಾಗ ಬಯಸುತ್ತಿದ್ದರು. ನೀನು ಈ




ದೇಶದ ಸ್ತ್ರೀಯರಲ್ಲಿ ಆಣಿಮುತ್ತು''.ಎಂದನು.

"ನನ್ನ ಸೌಂದರ್ಯವೆಲ್ಲ ನನ್ನ ಗಂಡನು ಹೋದಂದೇ ಹೋಯಿತು. ಅವರು ಯುದ್ಧಕ್ಕೆ ಹೋಗುವಾಗ ತಾವು ಸತ್ತರೆ ನಾನು ಮದುವೆ ಮಾಡಿಕೊಳ್ಳಬೇಕೆಂದು ಹೇಳಿದ ಮಾತು ನಿಜ. ಆದರೆ ನನ್ನ ಸ್ವಯಂವರ ಇಷ್ಟು ಶೋಚನೀಯವಾಗಿ ನಡೆಯುವುದೆಂದು ಭಾವಿಸಿರಲಿಲ್ಲ. ವಧುವನ್ನು ನೋಡಲು ಬಂದಾಗ ಆಕೆಗೆ ಆಭರಣ, ಚೀನಾಂಬರಗಳನ್ನು ತರುವುದು ಪದ್ಧತಿ. ಆದರೆ ಈಗ ನಡೆಯುತ್ತಿರುವುದಾದರೂ ಏನು? ಆಕೆಯ ಮನೆಯಲ್ಲಿ ತಂಗಿದ್ದು, ಆಕೆಯ ಆಸ್ತಿಯನ್ನು ನುಂಗಿಹಾಕುತ್ತಿದ್ದಾರೆ. ಛೆ, ಇದಕ್ಕಿಂತಲೂ ಅವಮಾನಕರವಾದುದು ಏನಾದರೂ

ಇದೆಯೇ ?" ಎಂದು ತನ್ನ ಅಸಮಾಧಾನ ಸೂಚಿಸಿದಳು. ಆಗ ದುರ್ಬುದ್ಧಿ ಇಂತೆಂದನು : "ನೀನು ಹೇಳಿದ ಮಾತು ನಿಜ, ಪದ್ಮಮುಖಿ. ನಾವೆಲ್ಲಾ ನಿನಗೆ ಕಾಣಿಕೆಗಳನ್ನು ಅರ್ಪಿಸಲು ಸಿದ್ಧರಿದ್ದೇವೆ. ಆದರೆ ಒಂದು ಮಾತುಮಾತ್ರ ಖಂಡಿತ. ನೀನು ನಮ್ಮಲ್ಲಿ ಯಾರಾದರೊಬ್ಬರನ್ನು ವಿವಾಹಮಾಡಿಕೊಳ್ಳುವ ತನಕ ಇಲ್ಲಿಂದ ನಾವು ಕದಲುವುದಿಲ್ಲ."

ಕೂಡಲೇ ಅವರು ತಮ್ಮ ತಮ್ಮ ಸೇವಕರನ್ನು ಮನೆಗಳಿಗೆ ಕಳುಹಿಸಿ ಪದ್ಮಮುಖಿಗೆ ಅಮೂಲ್ಯವಾದ ವಸ್ತುಗಳನ್ನು ತರಿಸಿ ಕೊಟ್ಟರು. ಅವುಗಳನ್ನು ತನ್ನ ದಾಸಿಯರಿಂದ ಹೊರಿಸಿಕೊಂಡು ಪದ್ಮಮುಖಿ ತನ್ನ ಕೋಣೆಗೆ ಹೊರಟುಹೋದಳು.

ಸಂಜೆಯಾದಕೂಡಲೇ ಸಭಾಂಗಣದಲ್ಲಿ ದೀಪಟಗೆಗಳನ್ನಿಟ್ಟರು. ಎಲ್ಲರೂ ಕುಡಿದು, ಗಲಾಟೆ ಮಾಡತೊಡಗಿದರು. ವಿಪುಲಯೋಧನು ರೂಪಧರನನ್ನು ಕುರಿತು "ಎಲವೋ ಮುದಿಗೂಬೆ, ನಿನಗೊಂದು ನೌಕರಿ ಕೊಟ್ಟೇನು. ಆದರೆ ನೀನು ಕಳ್ಳ" ಎಂದನು.

"ಹೊಲ ಉಳುವುದರಿಂದ ಮೊದಲು ಕುಡುಗೋಲಿಂದ ಹುಲ್ಲು ಕೊಯ್ಯುವವರೆಗೂ ಯಾವ ಕೆಲಸಕ್ಕಾದರೂ ನಾನು ಸಿದ್ಧನಿದ್ದೇನೆ. ಬೇಕಾದರೆ ನೀನು ನನ್ನೊಂದಿಗೆ ಪಂದ್ಯಕ್ಕೆ ನಿಲ್ಲು! ನೀನೊಬ್ಬ ಮಾತುಗಾರ. ರೂಪಧರನು ಈಗ ಹಿಂತಿರುಗಿ ಬಂದರೆ ನಿನ್ನ ಬಂಡವಾಳವೆಲ್ಲ ಬಯಲಾಗುತ್ತದೆ" ಕೆಣಕಿದ ರೂಪಧರ.

ವಿಪುಲಯೋಧನಿಗೆ ರೋಷಬಂತು. ಅಲ್ಲಿದ್ದ ಪೀಠವನ್ನು ಎತ್ತಿ ರೂಪಧರನಕಡೆಗೆಸೆದನು. ರೂಪಧರನು ಯುಕ್ತಿಯಿಂದ ತಪ್ಪಿಸಿಕೊಳ್ಳಲು ಅದು ಮತ್ತೊಬ್ಬನ ತಲೆಗೆ ಬಿತ್ತು. ಅವನು ನರಳುತ್ತಿರಲು, ಉಳಿದವರು ನಗತೊಡಗಿದರು.

ಧೀರಮತಿ ಗಂಭೀರಕಂಠದಿಂದ "ಏನಿದು ಗಲಾಟೆ. ಎಲ್ಲರೂ ತಿಂದಿರಿ, ಕುಡಿದಿರಿ. ಇನ್ನು ನಿಮ್ಮ ನಿಮ್ಮ ಮನೆಗಳಿಗೆ ಹೋಗಬಹುದಲ್ಲಾ" ಎಂದನು.

ಎಲ್ಲರೂ ಗೊಣಗುಟ್ಟಿಕೊಂಡು ಎದ್ದು ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಪಡಸಾಲೆಯಲ್ಲಿ ರೂಪಧರ ಮತ್ತು ಧೀರಮತಿಮಾತ್ರ ಉಳಿದರು. [ಇನ್ನೂ ಇದೆ]



# ರಾಜ ದ್ರೋಹಿ?

ಛಲಬಿಡದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಮರದಿಂದ ಶವವನ್ನು ಕೆಳಕ್ಕೆ ಇಳಿಸಿ ಭುಜದಮೇಲೆ ಹಾಕಿಕೊಂಡು ಮೌನ ವಾಗಿ ಶ್ಮಶಾನದತ್ತ ನಡೆಯ ತೊಡಗಿದನು. ಆಗ ಶವದಲ್ಲಿದ್ದ ಬೇತಾಳ ಹೀಗೆಂದಿತು: "ಎಲೈ ರಾಜನೇ, ನಿನ್ನ ತ್ಯಾಗಬುದ್ಧಿ ನಿಜ ವಾಗಿಯೂ ಪ್ರಶಂಸನೀಯವಾದುದು. ಆದರೆ ನಿನಗಿಂತಲೂ ಹೆಚ್ಚು ತ್ಯಾಗಶೀಲರು, ಇರು ವರು. ನಿನಗೆ ಗುಣಭೂಷಣನ ವಿಚಿತ್ರ ಕಥೆ ಯನ್ನು ಹೇಳುವೆನು, ಕೇಳು"

ಪೂರ್ವಕಾಲದಲ್ಲಿ ಕಾಶಿರಾಜನ ಆಸ್ಥಾನ ದಲ್ಲಿ ಗುಣಭೂಷಣನೆಂಬ ಯುವಕನಿದ್ದನು. ಅವನ ಜನ್ಮಸ್ಥಳ ಮಗಧದೇಶ. ಅವನ ತಂದೆ ಭಾರಿ ಕೋಟಾಧೀಶ್ವರನೆಂದೂ, ಗುಣಭೂಷ ಣನು ತಂದೆಯೊಂದಿಗೆ ಜಗಳವಾಡಿ, ಕಾಶಿ ನಗರಕ್ಕೆ ಬಂದು ಸಣ್ಣ ನೌಕರಿಯಲ್ಲಿರುವ ನೆಂದೂ ಜನ ಹೇಳುತ್ತಿದ್ದರು. ಅವನು ತುಂಬಾ ಮಿತಭಾಷಿ. ಕಂಡ ಕಂಡವರ ಸ್ನೇಹಮಾಡು

ಬೇತಾಳ ಕಥೆಗಳು



ತ್ರಿರಲಿಲ್ಲ. ಆದರಿಂದ ಅವನ ವಿಷಯ ಯಾರಿಗೂ ಸ್ಪಷ್ಟವಾಗಿ ತಿಳಿದಿರಲಿಲ್ಲ.

ಮಗಧದೇಶದವರು ಅನೇಕರು ಕಾಶೀ ನಗರದಲ್ಲಿ ವ್ಯಾಪಾರ ಮತ್ತು ಇತರೇ ಉದ್ಯೋಗಗಳಲ್ಲಿದ್ದರು. ಗುಣಭೂಷಣನು ಅವರೊಂದಿಗೆ ಗೆಳತನ ಬೆಳೆಸಿಕೊಂಡಿದ್ದನು.

ಹೀಗಿರಲು ರಾಜನಮೇಲೆ ಪಿತೂರಿ ನಡೆಯುತ್ತಿರುವ ಸುದ್ದಿ ಹೊರಬಿತ್ತು. ಮಗಧ ದೇಶದವರು ಅನೇಕರು ಈ ಪಿತೂರಿಯಲ್ಲಿ ಸೇರಿದ್ದರು. ಅವರೆಲ್ಲರನ್ನೂ ರಾಜಭಟರು ಬಂಧಿಸಿ ಸೆರೆಮನೆಗೊಯ್ದರು. ಉಳಿದವರೊಂದಿಗೆ ಗುಣಭೂಷಣನನ್ನೂ ಬಂಧಿಸಲಾಯಿತು. ವಿಚಾರಣೆ ನಡೆಯಿತು. ಅನೇಕರು ರಾಜದ್ರೋಹಕ್ಕೆ ಹವಣಿಸಿರುವುದು ದೃಢವಾಯಿತು. ಅವರೆಲ್ಲರನ್ನೂ ಗಲ್ಲಿಗೇರಿಸಿದರು. ಗುಣಭೂಷಣ ಮತ್ತು ಇನ್ನೂ ಇಬ್ಬರು ಮೂವರಮೇಲಿನ ಅಪವಾದ ರುಜುವಾತಾಗಲಿಲ್ಲ. ಆದರೂ ಪ್ರಧಾನಮಂತ್ರಿ, ಅವರನ್ನು ಇನ್ನೂ ಕೊಂಚದಿನ ಸೆರೆಮನೆಯಲ್ಲಿಡಲು ನಿರ್ಧರಿಸಿದನು. ಅವರು ರಾಜದ್ರೋಹಿಗಳಾಗಿದ್ದ ಪಕ್ಷಕ್ಕೆ ಎಂದಾದರೊಂದು ದಿನ ಗುಟ್ಟುರಟ್ಟಾಗುವುದೆಂದು ಆತನ ನಂಬಿಕೆ.

ಕಾಶಿನಗರದ ಮಂತ್ರಿಯ ಹೆಸರು ಕೈಲಾಸನಾಥ. ಅವನ ವಯಸ್ಸು ಸುಮಾರು ನಲವತ್ತಿರಬಹುದು. ಮೊದಲನೇ ಕುಟುಂಬ ತೀರಿಕೊಂಡನಂತರ ಮತ್ತೆ ವಿವಾಹ ಮಾಡಿಕೊಳ್ಳದೆ, ತನ್ನ ಯಾವತ್ತೂ ಸಮಯ, ಶಕ್ತಿಗಳನ್ನು ರಾಜ್ಯದ ಮೇಲ್ಮೆಗಾಗಿ ವಿನಿಯೋಗಿಸುತ್ತಿದ್ದನು. ಅವನು ಮಹಾ ಮೇಧಾವಿ. ರಾಜದ್ರೋಹಿಗಳಾಗಿ ಸೆರೆಯಲ್ಲಿರುವವರ ರಹಸ್ಯಗಳನ್ನು ತಿಳಿಯಲು ಅವನು ಸಕಲ ಏರ್ಪಾಟುಗಳನ್ನು ಮಾಡಿದ್ದನು.

ಗುಣಭೂಷಣನ ನಡವಳಿಕೆಮಾತ್ರ ಮಂತ್ರಿಯನ್ನು ವಿಸ್ಮಯ ಗೊಳಿಸಿತು. ಅವನು ಸೆರೆಮನೆಯಲ್ಲಿದ್ದರೂ ಅವನ ದರ್ಪ ಕೊಂಚವಾದರೂ ಕಡಿಮೆಯಾಗಲಿಲ್ಲ. ಅನವಸರವಾದ ಪ್ರಶ್ನೆಗಳಿಗೆ ಉತ್ತರ ಕೊಡುತ್ತಿರಲಿಲ್ಲ. ಕಾರಾಗೃಹದಲ್ಲಿದ್ದ ಕಾವಲುಗಾರರೊಂದಿಗೆ ತಾನೊಬ್ಬ ಅಧಿಕಾರಿಯಂತೆ ವರ್ತಿಸುತ್ತಿದ್ದನು. ಬೋನಿನಲ್ಲಿ ಸಿಲುಕಿಕೊಂಡ ಸಿಂಹದಂತೆ ಯೋಚನಾಮಗ್ನನಾಗಿರುತ್ತಿದ್ದನು.




ಅವನ ಯೋಚನೆಯೆಲ್ಲಾ ಒಬ್ಬ ವ್ಯಕ್ತಿಯ ಮೇಲೆ ಹೊರಳಿತ್ತು. ಆ ವ್ಯಕ್ತಿ ಅವನ ಪ್ರೇಯಸಿ, ಮಾಧವಿ. ಆಕೆಯ ನಿಮಿತ್ತ ಅವನು ಮಗಧದೇಶವನ್ನು ತೊರೆದು ಕಾಶಿ ರಾಜ್ಯದಲ್ಲಿ ಬಾಳಬೇಕಾಗಿತ್ತು.

ಗುಣಭೂಷಣನ ತಂದೆಯಂತೆಯೇ ಮಾಧವಿಯ ತಂದೆಯೂ ಐಶ್ವರ್ಯವಂತ. ಆದರೆ ಆತನು ಅನಿರೀಕ್ಷಿತವಾಗಿ ಕಾಲವಾದನು. ದಾಯಾದಿಗಳು ಆತನ ಯಾವತ್ತೂ ಆಸ್ತಿಯನ್ನು ಅಪಹರಿಸಿ ಮಾಧವಿಯ ಕೈಗೆ ಚಿಪ್ಪು ಕೊಟ್ಟರು. ಕೋಟ್ಯಾಧೀಶ್ವರನ ಕುಮಾರಿಯಾಗಿದ್ದರೂ ಮಾಧವಿ ತಿಂಡಿ, ಬಟ್ಟೆಗಳಿಗೆ ತನ್ನ ಶತ್ರುಗಳಮೇಲೆ ಆಧಾರಪಡಬೇಕಾಯಿತು. ಅವಳು ಸೇವಕಳಂತೆ ಜೀವಿಸಬೇಕಾದ ಸ್ಥಿತಿಯೊದಗಿತು. ಗುಣಭೂಷಣನು ಮಾಧವಿಯನ್ನು ಬಾಲ್ಯದಿಂದಲೂ ಬಲ್ಲನು. ಅವರ ಬಾಲ್ಯದ ಗೆಳೆತನ ಪ್ರೇಮವಾಗಿ ಬದಲಾಯಿಸಿತ್ತು. ಅವಳಿಗೆ ಸಾಧ್ಯವಾದ ಸಹಾಯ ಮಾಡಲು ಅವನು ನಿರ್ಧರಿಸಿದನು. ಎಂದಿಗಾದರೂ ಅವಳನ್ನೇ ಮದುವೆಯಾಗಲು ನಿಶ್ಚಯಿಸಿದನು. ಆದರೆ ಅವನ ತಂದೆಗೆ ಈ ಸಂಬಂಧ ಸರಿಬೀಳಲಿಲ್ಲ. ಮಾಧವಿಯೊಂದಿಗೆ ಯಾವರೀತಿಯ ಸಂಬಂಧವಿಟ್ಟುಕೊಳ್ಳಬಾರದೆಂದೂ, ಅವಳೊಂದಿಗೆ ಮಾತನಾಡಿದ ವಿಷಯ ತಿಳಿದುಬಂದರೂ ಮನೆಯಿಂದ ಓಡಿಸುವುದಾಗಿಯೂ ಬೆದರಿಕೆ ಹಾಕಿದನು. ಗುಣಭೂಷಣನು ತಂದೆಯ ಮಾತಿಗೆ ಲಕ್ಷ್ಯ ಮಾಡದೆ, ಆತನಿಗೆ ತಿಳಿಯದೆ ಮಾಧವಿಗೆ ಆಗಾಗ ಹಣಸಹ ಕಳುಹಿಸುತ್ತಿದ್ದನು. ಒಂದು ದಿನ ತಂದೆಗೆ ಈ ವಿಷಯ ತಿಳಿಯಲು ಅವನನ್ನು ಮನೆಯಿಂದ ಹೊರಗೆ ಅಟ್ಟಿದನು.

ಗುಣಭೂಷಣನು ಕಾಶಿನಗಕ್ಕೆ ಬಂದು ಒಂದು ಉದ್ಯೋಗವನ್ನು ಸಂಪಾದಿಸಿದನು. ಈ ನೌಕರಿಯಲ್ಲಿ ಕೀರ್ತಿಪ್ರತಿಷ್ಠೆಗಳನ್ನು ಪಡೆದು, ಅನಂತರ ಮಾಧವಿಯನ್ನು ಕರೆದುಕೊಂಡು ಬಂದು ಮದುವೆ ಮಾಡಿಕೊಳ್ಳುವ ಯೋಚನೆ ಮಾಡಿದ್ದನು. ಆದರೆ ಇಷ್ಟರಲ್ಲಿ ಈ ರಾಜದ್ರೋಹದ ಆರೋಪಣೆ ಅವನ ಮೇಲೆ ಬಿದ್ದು ತೊಂದರೆಕೊಟ್ಟಿತು.

ಮಗಧದೇಶದಲ್ಲಿ ಮಾಧವಿ ಸಹ ತನ್ನ ಆಶೆಗಳನ್ನೆಲ್ಲಾ ಗುಣಭೂಷಣನಲ್ಲಿಟ್ಟಿದ್ದಳು.

ಅವನಿಗೆ ಕಾಶಿರಾಜನ ಆಸ್ಥಾನದಲ್ಲಿ ಕೆಲಸ ಸಿಕ್ಕಿತೆಂದು ಕೇಳಿ ತುಂಬಾ ಸಂತೋಷ ಪಟ್ಟಳು. ತನ್ನ ಪರಿಚಯದವರು ಯಾರಾದರೂ ಕಾಶಿನಗರಕ್ಕೆ ಹೋದರೆ ಅವರೊಂದಿಗೆ ತನ್ನ ಯೋಗಕ್ಷೇಮ ಸಮಾಚಾರವನ್ನು ಗುಣಭೂಷಣನಿಗೆ ತಿಳಿಸುವಳು. ಅದೇ ರೀತಿ ಗುಣಭೂಷಣನೂ ಸಹ ಆಗಾಗ್ಗೆ ಆಕೆಗೆ ತನ್ನ ಕ್ಷೇಮ ಸಮಾಚಾರವನ್ನು ತಿಳಿಸುತ್ತಿದ್ದನು; ಹಣವನ್ನೂ ಕಳುಹಿಸಿಕೊಡುತ್ತಿದ್ದನು.

ಹೀಗಿರಲು ಒಂದು ದಿನ ಮಾಧವಿಗೆ ಕಾಶಿ ದೇಶದಲ್ಲಿ ರಾಜದ್ರೋಹಿಗಳನ್ನು ಗಲ್ಲಿಗೇರಿಸಿದರೆಂಬ ವಿಷಯ ತಿಳಿಯಿತು. ಅವರಲ್ಲಿ ಅನೇಕರು ಮಗಧದೇಶಸ್ಥರೆಂದು ತಿಳಿದು ಅವಳು ಭಯಕಂಪಿತಳಾದಳು. ರಾಜದ್ರೋಹಿಗಳ ಗುಂಪಿಗೆ ಗುಣಭೂಷಣನೂ ಸೇರಿರುವನೋ ಏನೋ ಎಂದು ಆಕೆ ತಳಮಳಿಸಿದಳು. ರೆಕ್ಕೆಗಳನ್ನು ಕಟ್ಟಿಕೊಂಡು ಕಾಶಿಗೆ ಹಾರಿ ಹೋಗಬೇಕೆನಿಸಿತು. ಚಡಪಡಿಸಿದಳು.

ಕೊಂಚಕಾಲದ ನಂತರ ಅವಳಿಗೆ ಕಾಶಿಗೆ ಹೋಗುವ ಅವಕಾಶ ಒದಗಿತು. ಅವಳ ಪರಿಚಯಸ್ಥರು ಕೆಲವರು ತೀರ್ಥಯಾತ್ರೆಗೆ ಹೊರಟರು. ಅವರೊಂದಿಗೆ ಮಾಧವಿ ಸಹ ಹೊರಟಳು. ಯಾತ್ರಿಕರು ಅನೇಕ ಪುಣ್ಯಸ್ಥಳಗಳನ್ನು ಸಂದರ್ಶಿಸಿ ಕೆಲವು ತಿಂಗಳುಗಳಾದ ನಂತರ ಕಾಶಿನಗರವನ್ನು ಸೇರಿಕೊಂಡರು. ಕಾಶಿ ತಲುಪಿದಕೂಡಲೇ ಮಾಧವಿ ಗುಣಭೂಷಣನ ವಿಷಯವನ್ನು ಕುರಿತು ವಿಚಾರಿಸಿದಳು. ಗುಣಭೂಷಣನನ್ನು ಗಲ್ಲಿಗೇರಿಸಲಿಲ್ಲ



ವೆಂದೂ, ಅವನು ಸೆರೆಮನೆಯಲ್ಲಿ ಕೊಳೆಯುತ್ತಿರುವನೆಂದೂ ತಿಳಿದುಬಂತು.

"ಗುಣಭೂಷಣನು ರಾಜದ್ರೋಹವನ್ನು ಬಗೆಯುವಷ್ಟು ಹೀನನಲ್ಲ. ಅವನನ್ನು ನಿಷ್ಕಾರಣವಾಗಿ ಸೆರೆಮನೆಯಲ್ಲಿ ಕೂಡಿಹಾಕಿರುವರು. ಅವನನ್ನು ಬಿಡಿಸುವುದೆಂತು?" ಎಂದು ಅವಳು ನಗರದ ಹಿರಿಯರೊಂದಿಗೆ ಪ್ರಸ್ತಾಪಿಸಿದಳು.

"ಮಂತ್ರಿ ಕೈಲಾಸನಾಥನು ಮನಸ್ಸು ಮಾಡಿದರೆ ನಿಮಿಷಮಾತ್ರದಲ್ಲಿ ಬಿಡುಗಡೆಯಾಗಬಹುದು. ಗುಣಭೂಷಣನ ಆಪ್ತರು ಯಾರಾದರೂ ಆತನನ್ನು ಭೇಟಿಮಾಡಿದರೆ ಉತ್ತಮ" ಎಂದು ಅವರು ಹೇಳಿದರು.

ಗುಣಭೂಷಣನ ಆಪ್ತರು ಎಂದೋ ಅವನ ಕೈಬಿಟ್ಟಿದ್ದರು. ತಾನು ಗುಣಭೂಷಣನ ಸಹೋದರಿ ಎಂದು ಹೇಳಿಕೊಂಡು ಮಂತ್ರಿಯನ್ನು ಕಾಣಲು ಮಾಧವಿ ನಿಶ್ಚಯಿಸಿದಳು.

ಅವಳಿಗೆ ಮಂತ್ರಿಯ ಭೇಟಿ ಸುಲಭವಾಗಿ ಸಿಕ್ಕಿತು. ಮಾಧವಿಯನ್ನು ಕಂಡಕೂಡಲೇ ಮಂತ್ರಿ ಕೈಲಾಸನಾಥನು ಚಕ್ಕಸಬೆರಗಾದನು. ಆಕೆ ರೂಪಸಿಯಷ್ಟೇ ಅಲ್ಲದೆ, ನಿಷ್ಕಪಟಿಯೂ, ಸರಳಜೀವಿಯೂ ಆಗಿರುವಂತೆ ಅವನಿಗೆ ತೋರಿತು. ಅವಳಲ್ಲಿ ವಿನಯವಿಧೇಯತೆಗಳು ಅಪಾರವಾಗಿರುವಂತೆ ತೋರಿತು. ಅವಳ ಹೃದಯ ಅತಿ ಕೋಮಲವಾದುದೆಂದು ಅವನು ಗ್ರಹಿಸಿದನು. ಗುಣಭೂಷಣನ ಪ್ರಸಂಗ ಬಂದಕೂಡಲೇ ಅವಳ ಕಣ್ಣಲ್ಲಿ ನೀರು ತುಂಬಿತು. "ನನಗೆ ಆತನೂ, ಆತನಿಗೆ ನಾನೂ ಹೊರತು ನಮಗೆ ಬೇರೆ ಆಪ್ತರಿಲ್ಲ.





ಆತನು ಪ್ರಾಣಹೋದರೂ ರಾಜದ್ರೋಹ ಬಗೆಯುವ ವ್ಯಕ್ತಿಯಲ್ಲ. ನನ್ನಮೇಲೆ ಕೃಪೆ ದೋರಿ ಆತನನ್ನು ಬಿಡುಗಡೆಮಾಡಿ" ಎಂದು ಕೇಳಿಕೊಂಡಳು.

"ನಿನ್ನ ಸಹೋದರನು ರಾಜದ್ರೋಹಿ ಯಲ್ಲವೆಂಬ ಅಂಶ ದೃಢವೇನೋ ಆಗಿದೆ. ಆತನ ವಿಷಯ ಇಲ್ಲಿ ಯಾರಿಗೂ ತಿಳಿದಂತೆ ತೋರುವುದಿಲ್ಲ. ಆತನನ್ನು ನಿನ್ನೊಂದಿಗೆ ನಿಮ್ಮ ಸ್ವದೇಶಕ್ಕೆ ಕರೆದುಕೊಂಡು ಹೋಗುವಂತಿದ್ದರೆ ನನ್ನ ಅಡ್ಡಿಯೇನಿಲ್ಲ. ನಿನ್ನನ್ನು ಕಂಡರೆ ಶ್ರೀಮಂತರ ತರುಣಿಯಂತೆ ತೋರುತ್ತಿರುವೆ. ಆತನೂಸಹ ನಿನ್ನಂತೆಯೇ ಸಾಧು ಶೀಲನಿರಬೇಕು," ಎಂದ ಮಂತ್ರಿ. "ಹೌದು. ನಮ್ಮ ಅಣ್ಣ ನಿಜವಾಗಿ ತುಂಬಾ ಸರಳ ಸ್ವಭಾವದವನು. ಆತನಲ್ಲಿ ಆಶೆಯನ್ನಿಟ್ಟುಕೊಂಡೇ ನಾನು ಜೀವಿಸುತ್ತಿರುವೆನು" ಎಂದಳು ಮಾಧವಿ.

"ಹಾಗೋ, ಹಾಗಾದರೆ ನಿನಗಿನ್ನೂ ವಿವಾಹವಾಗಿಲ್ಲವೇ?" ಎಂದು ಮಂತ್ರಿ ಕುತೂಹಲದಿಂದ ಕೇಳಿದನು.

ಮಾಧವಿ ನಾಚಿಕೆಯಿಂದ ತಲೆಬಾಗಿಸಿ "ಅಣ್ಣ ಸೆರೆಮನೆಯಲ್ಲಿರಲು ನನ್ನ ಮದುವೆ ಹೇಗಾದೀತು?" ಎಂದಳು. ಮಾರನೇಯ ದಿನ ಬರುವಂತೆ ಮಾಧವಿಗೆ ಹೇಳಿ ಕಳುಹಿಸಿ, ಕಾರಾಗೃಹದಲ್ಲಿರುವ ಗುಣಭೂಷಣನನ್ನು ತನ್ನಬಳಿಗೆ ಕರೆತರುವಂತೆ ಭಟರಿಗೆ ಆಜ್ಞಾಪಿಸಿದನು. ಮಾಧವಿಯ ಅಂದಚೆಂದ, ನಡೆನುಡಿಗಳು ಆತನನ್ನು ಆಕರ್ಷಿಸಿದ್ದುವು. ಅವಳಂತಹ ಮಡದಿಯಿದ್ದರೆ ತನ್ನ ಬಾಳು ಸುಸೂತ್ರವಾಗಿ ಸಾಗುವುದೆಂದು ಆತನಿಗೆ ತೋರಿತು. ಆತನು ಪ್ರತಿದಿನ ಅನೇಕ ಸ್ತ್ರೀಯರನ್ನು ನೋಡುತ್ತಿದ್ದನು. ಯಾರೂ ಆತನನ್ನು ಆಕರ್ಷಿಸಿರಲಿಲ್ಲ. ಅಂದಿನತನಕ ಪುನರ್ವಿವಾಹವಾಗುವ ಯೋಚನೆ ಆತನಲ್ಲಿ ತಲೆಹಾಕಿರಲಿಲ್ಲ.

ಭಟರು ಗುಣಭೂಷಣನನ್ನು ಕರೆತಂದರು. ಮಂತ್ರಿ ಗುಣಭೂಷಣನಿಗೆ ಒಂದು ಪೀಠವನ್ನು ತೋರಿಸಿ "ನಿನ್ನ ತಂಗಿ ಮಾಧವಿ ನಿನ್ನನ್ನು ಸೆರೆಯಿಂದ ಬಿಡುಗಡೆ ಮಾಡುವಂತೆ ಮನವಿ ಮಾಡಿಕೊಂಡಳು. ಆಕೆ ತುಂಬಾ ಯೋಗ್ಯಳೂ, ಬುದ್ಧಿವಂತಳೂ ಆಗಿದ್ದಾಳೆ. ಆಕೆಯ ಸಲುವಾಗಿ ನೀನು ಬಹಳ ಕಷ್ಟಗಳನ್ನು ಅನುಭ



ವಿಸಬೇಕಾಯಿತಂತೆ. ಅಂತಹ ಸೋದರಿಗಾಗಿ ಯಾರಾದರೂ ಕಷ್ಟಪಡಲು ಹಿಂದೆಗೆಯ ಲಾರರು. ನೀನು ನಿಮ್ಮ ರಾಜ್ಯಕ್ಕೆ ಹಿಂತಿರುಗಿ ಹೋಗಲು ಸಿದ್ಧವಾಗಿದ್ದರೆ ಕೂಡಲೇ ಬಿಡು ಗಡೆ ಮಾಡಿಸುವೆನು" ಎಂದ.

ನಿಮ್ಮ ದಯೆಗೆ ನಾನು ಕೃತಜ್ಞನಾಗಿದ್ದೇನೆ. ನಾನು ಮತ್ತೆ ನಮ್ಮ ದೇಶಕ್ಕೆ ಹಿಂತಿರುಗು ವುದು ಆಗದ ಕೆಲಸ. ಇಲ್ಲಿ ಸೆರೆಮನೆಯಲ್ಲಿರು ವುದೂ, ಅಲ್ಲಿ ಸ್ವೇಚ್ಛೆಯಾಗಿರುವುದೂ ಒಂದೇ! ನನಗೆ ಯಾವ ವ್ಯತ್ಯಾಸವೂ ತೋರದು. ಅಲ್ಲಿ ನನಗೆ ಮಾಧವಿಯಹೊರತು ಬೇರೆ ಯಾರೂ ಆಪ್ತರಿಲ್ಲ. ಆಕೆಯನ್ನೇ ಇಲ್ಲಿಗೆ ಕರೆಯಿಸಿ ಕೊಳ್ಳುವ ಯೋಚನೆಯಿತ್ತು. ಅಷ್ಟರಲ್ಲಿ ನನ್ನ ಮೇಲೆ ಈ ರಾಜದ್ರೋಹದ ಅಪವಾದ ಬಂತು" ಎಂದನು ಗುಣಭೂಷಣ.

ಮಂತ್ರಿ ಕ್ಷಣಕಾಲ ಯೋಚಿಸಿ "ನಿನಗೆ ಸ್ವದೇಶಾಭಿಮಾನವಿಲ್ಲದ ಪಕ್ಷಕ್ಕೆ ನಿನ್ನಿಂದ ಕಾಶಿರಾಜ್ಯಕ್ಕೆ ಯಾವ ತೊಂದರೆಯೂ ಉಂಟಾಗದು. ನಾನು ಅರಸರಿಗೆ ಹೇಳಿ ನಿನಗೆ ಆಸ್ಥಾನದಲ್ಲಿ ಒಂದು ಉದ್ಯೋಗವನ್ನು ಕೊಡಿಸಿಕೊಡುತ್ತೇನೆ" ಎಂದ.

"ನಿಮ್ಮ ಸಹಾಯವನ್ನು ನಾನೆಂದಿಗೂ ಮರೆಯಲಾರೆ" ಎಂದು ಗುಣಭೂಷಣನು ಕೈಜೋಡಿಸಿ ಹೇಳಿದನು. ಅವನ ಕಣ್ಣುಗಳಲ್ಲಿ ಸಂತೋಷ ತುಂಬಿತುಳುಕುತಿತ್ತು. "ಒಂದು ಕ್ಷಣ ಕುಳಿತುಕೊ. ನಾನು ನಿನ್ನೊಂದಿಗೆ ಒಂದು ವಿಷಯವನ್ನು ಪ್ರಸ್ತಾಪಿಸಬೇಕೆಂ



ದಿದ್ದೇನೆ" ಎಂದು ಮಂತ್ರಿ ಹೇಳಲು, ಗುಣ ಭೂಷಣನು ವಿಸ್ಮಯಹೊಂದಿದನು.

"ಮದುವೆ ಮಾಡಿಕೊಳ್ಳುವಂತೆ ನನಗೆ ಅನೇಕರು ಸಲಹೆಕೊಟ್ಟರು. ತಮ್ಮ ಕುವರಿ ಯರನ್ನು, ತಂಗಿಯರನ್ನು ನನಗೆ ಕೊಡಲು ಅನೇಕರು ಮುಂದೆಬಂದರು. ನನಗೆ ವಿವಾಹ ವಾಗುವ ಇಚ್ಛೆಯಿರಲಿಲ್ಲ. ಆದರೆ ಇಂದು ನಿನ್ನ ತಂಗಿಯನ್ನು ಕಂಡನಂತರ ಆಕೆಯನ್ನು ವಿವಾಹವಾಗಬೇಕೆಂಬ ಯೋಚನೆಯುಂಟಾ ಗಿದೆ. ಆಕೆಯಂತಹ ಮಡದಿಯಿದ್ದರೆ ನನ್ನ ಬಾಳು ಶೋಭಿಸುವುದೆಂದು ತೋರಿತು. ಆಕೆಗೆ ನನ್ನನ್ನು ಶಿಫಾರಸುಮಾಡುವೆಯಾ? ಆದರೆ ನಿರ್ಬಂಧಮಾಡಬೇಡ" ಎಂದ ಮಂತ್ರಿ. ಇದನ್ನು ಕೇಳಿ ಗುಣಭೂಷಣನು ಅಚ್ಚರಿಗೊಂಡನು.



"ನೀವು ಕೇಳಿದುದಕ್ಕೆ ಸಮಾಧಾನ ಕೊಡುವ ಮುನ್ನ ನಾನೊಂದು ವಿಷಯವನ್ನು ಹೇಳ ಬಯಸುವೆನು. ನನಗೆ ಮತ್ತೆ ಆಸ್ಥಾನದಲ್ಲಿ ನೌಕರಿ ಕೊಡಿಸಲು ಮಾಧವಿಯೇ ಕಾರಣವಾಗಿದ್ದರೆ ಈ ವಿಷಯ ನಿಮಗೆ ತಿಳಿದಿರುವುದು ಅಗತ್ಯ. ಆಮೇಲೆ ನನ್ನ ವಿಷಯವನ್ನು ನಿರ್ಧರಿಸಿರಿ. ನಾನು ಸಂಪೂರ್ಣವಾಗಿ ನಿರ್ದೋಷಿಯಲ್ಲ. ಪಿತೂರಿಯಲ್ಲಿ ಪ್ರತ್ಯಕ್ಷ ಸಂಬಂಧವಿಲ್ಲದಿದ್ದರೂ ನನಗೆ ಪಿತೂರಿಯ ವಿಷಯವೇನೋ ತಿಳಿದಿತ್ತು. ನಮ್ಮ ದೇಶದಲ್ಲಿ ತುಂಬಾ ಪ್ರಭಾವಶಾಲಿಯಾದ ವ್ಯಕ್ತಿಯೊಬ್ಬನು ಪಿತೂರಿಗಾರರ ತಂಡದಲ್ಲಿದ್ದನು. ಮಾಧವಿ ನಿಜವಾಗಿ ನನ್ನ ತಂಗಿಯಲ್ಲ; ಪ್ರೇಯಸಿ. ಆಕೆಯ ತಂದೆ ಕೋಟ್ಯಾಧೀಶ್ವರರು. ಅವರು ತೀರಿಕೊಂಡ ಕೂಡಲೇ ಅವರ ಆಸ್ತಿಯನ್ನೆಲ್ಲಾ ದಾಯಾದಿಗಳು ಅಪಹರಿಸಿ, ಆಕೆಯನ್ನು ಬಿಕಾರಿಯನ್ನಾಗಿ ಮಾಡಿದರು. ಮಾಧವಿಯ ಆಸ್ತಿಯೆಲ್ಲಾ ಆಕೆಗೆ ದಕ್ಕುವಂತೆ ತಾನು ಸಹಾಯಮಾಡುವುದಾಗಿ ಆತ ನನಗೆ ಮಾತುಕೊಟ್ಟಿದ್ದನು. ನಾನು ರಾಜರ ಉಪ್ಪು ತಿನ್ನುತ್ತಿದ್ದರೂ, ಮಾಧವಿಗೆ ಸಹಾಯಮಾಡುವೆನೆಂಬ ಆಶೆಯಿಂದ ಈ ಗುಟ್ಟನ್ನು ರಟ್ಟುಮಾಡಲಿಲ್ಲ. ಹಾಗೆ ನೋಡಿದರೆ ನಾನೂ ಸಹ ರಾಜದ್ರೋಹಿಯಾಗಲಿಲ್ಲವೇ? ಈ ವಿಷಯ ನಿಮಗೆ ಮರೆಮಾಚದೆ ತಿಳಿಸಿರುವೆನು. ಇನ್ನು ನೀವು ಕೇಳಿದುದಕ್ಕೆ ನನ್ನ ಸಮಾಧಾನವಿಷ್ಟೇ. ನೀವು ಮಾಧವಿಯನ್ನು ವಿವಾಹವಾಗಲಪೇಕ್ಷಿಸಿರುವುದರಿಂದ ನಿಮಗಿಂತಲೂ ಉತ್ತಮ ಪತಿ



ಸಿಗಲಾರನೆಂದು ಆಕೆಗೆ ಹೇಳುವೆನು. ಇದೇನೂ ಬೂಟಾಟಿಕೆಯ ಮಾತಲ್ಲ. ಸತ್ಯವಾಗಿ ಹೇಳುತ್ತಿದ್ದೇನೆ. ಆಕೆಗಿಷ್ಟವಾದರೆ ನಿಮ್ಮನ್ನು ವಿವಾಹವಾಗುವಳು. ಇಲ್ಲದ ಪಕ್ಷಕ್ಕೆ ನಿರಾಕರಿಸುವಳು. ನಿಮ್ಮನ್ನೆ ಮದುವೆಯಾಗುವಂತೆ ಆಕೆಯನ್ನು ಬಲವಂತಪಡಿಸುವ ಹಕ್ಕು ನನಗಿಲ್ಲ." ಎಂದ ಗುಣಭೂಷಣ.

"ಇಲ್ಲ, ಇಲ್ಲ, ನೀನು ನನ್ನ ವಿಚಾರ ಆಕೆಯೊಂದಿಗೆ ಪ್ರಸ್ತಾಪಿಸಬೇಡ. ಆಕೆಯ ಸಲುವಾಗಿಯೇ ಅಲ್ಲವೇ ನೀನು ರಾಜದ್ರೋಹಕ್ಕಾಗಿ ಶಿಕ್ಷೆ ಅನುಭವಿಸಿದೆ. ನೀನೆ ಆಕೆಯನ್ನು ಮದುವೆಯಾಗುವುದೇ ಸರಿ, ಉತ್ತಮ" ಎಂದು ಮಂತ್ರಿ ಕೂಡಲೇ ಗುಣಭೂಷಣನನ್ನು ಸೆರೆಯಿಂದ ಬಿಡುಗಡೆ ಮಾಡಿಸಿದನು.

ಇಷ್ಟುಮಾತ್ರವೇ ಅಲ್ಲ, ಗುಣಭೂಷಣನಿಗೆ ರಾಜನು ಆಸ್ಥಾನದಲ್ಲಿ ಉನ್ನತಪದವಿಯನ್ನೂ ಕೊಟ್ಟನು. ಮಾಧವಿ ಗುಣಭೂಷಣರಿಗೆ ವೈಭವದಿಂದ ವಿವಾಹವೂ ಆಯಿತು.

ಈ ಕಥೆಯನ್ನು ಹೇಳಿ ಬೇತಾಳ "ಎಲೈ ರಾಜನೆ, ಗುಣಭೂಷಣನು ತಾನು ಸೆರೆಮನೆಯಿಂದ ಬಿಡುಗಡೆ ಹೊಂದುವ ಸಮಯದಲ್ಲಿ ಮಂತ್ರಿ ತನ್ನನ್ನು ನಿರಪರಾಧಿ ಎಂದು ಭಾವಿಸಿ ಬಿಡುಗಡೆ ಮಾಡುವುದು ಇಷ್ಟವಿಲ್ಲದೆ ನಿಜ ನುಡಿದು ತನ್ನ ಜೀವವನ್ನೂ, ಮಾಧವಿಯನ್ನೂ ಕಳೆದುಕೊಳ್ಳುವ ಪರಿಸ್ಥಿತಿ ಕಟ್ಟಿಸಿಕೊಂಡನು. ರಾಜದ್ರೋಹಿಯೆಂದು ತಿಳಿದನಂತರ ಗುಣಭೂಷಣನನ್ನು ಗಲ್ಲಿಗೇರಿಸಿ ಮಾಧವಿಯನ್ನು ಮದುವೆಯಾಗುವ ಅವಕಾಶವಿದ್ದರೂ ಸಹ



ಕೈಲಾಸನಾಥನು ಮಾಧವಿಯನ್ನೂ ತನ್ನ ಸೌಖ್ಯವನ್ನೂ ತ್ಯಾಗಮಾಡಿದನು. ಈರ್ವರಲ್ಲಿ ಯಾರ ತ್ಯಾಗ ಹಿರಿದು? ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳು ಗಳಾದೀತು, ಜೋಕೆ" ಎಂದನು.

"ನಿಸ್ಸಂದೇಹವಾಗಿ ಗುಣಭೂಷಣನ ತ್ಯಾಗವೇ ಹಿರಿದು. ಮಾಧವಿಯ ಮೇಲಿನ ಪ್ರೇಮ ಉಜ್ವಲವಾದುದು; ಉನ್ನತ ವಾದುದು. ಮಂತ್ರಿಗೂ ಆಕೆಯಲ್ಲಿ ಅನುರಾಗ ವಿರುವುದೆಂದು ತಿಳಿದನಂತರ ಅವನು ನಿಜ ನುಡಿದನು. ಇಲ್ಲದಿದ್ದರೆ ಅವನು ಮಾಧವಿ ತನ್ನ ತಂಗಿಯುಲ್ಲವೆಂದಾಗಲೀ, ತಾನು ಪಿತೂ ರಿಯ ವಿಷಯವನ್ನು ಬಲ್ಲೆನೆಂದಾಗಲೀ ಮಂತ್ರಿ ಯೊಂದಿಗೆ ಹೇಳುವ ಪ್ರಮೇಯವಿರಲಿಲ್ಲ. ನಿಷ್ಕಲ್ಮಷವಾದ ಪ್ರೇಮವುಳ್ಳವನು ಆ ಪ್ರೇಮದ ಫಲಿತವಾಗಿ ಮೋಸಹೋಗಬಾರದು. ಮಾಧ ವಿಯ ಮೇಲಿನ ಪ್ರೇಮದಿಂದ ತಾನು ನಿರ್ದೋಷಿಯೆಂದು ಭಾವಿಸುವುದು ಗುಣ ಭೂಷಣನಿಗೆ ಇಷ್ಟವಿರಲಿಲ್ಲ. ಆದರಿಂದ ಅವನು ತನ್ನ ಪ್ರಾಣವನ್ನೂ ಮಾಧವಿಯನ್ನೂ ತ್ಯಾಗಮಾಡಲು ಸಿದ್ಧನಾದನು. ವಾಸ್ತವ ವಾಗಿ ಮಂತ್ರಿ ತೋರಿದ ತ್ಯಾಗವೇನೂ ಇಲ್ಲ. ಇದಕ್ಕೆ ಕೆಲವಾರು ಕಾರಣಗಳಿವೆ. ಕೈಲಾಸ ನಾಥನು ಮಾಧವಿಯನ್ನು ಪ್ರೇಮಿಸಿದ್ದಾಗ್ಯೂ, ಆಕೆಗೆ ಗುಣಭೂಷಣನ ಹೊರತು ಮತ್ತೆ ಯಾರೂ ಆಪ್ತರಿಲ್ಲವೆಂದೂ, ಗುಣಭೂಷ ಣನು ಆಕೆಯ ಸಹೋದರನಾದುದರಿಂದ ತನಗೆ ಯಾರೂ ಸ್ಪರ್ಧಿಗಳಿರಲಾರರೆಂದೂ ನಂಬಿದ್ದನು. ಗುಣಭೂಷಣನು ಆಕೆಯ ಪ್ರಿಯ ನೆಂದು ತಿಳಿದನಂತರ ಆ ನಂಬಿಕೆ ಮಾಯ ವಾಯಿತು. ಗುಣಭೂಷಣನು ರಾಜದ್ರೋಹಿ ಯೆಂದು ಅವನನ್ನು ಗಲ್ಲಿಗೇರಿಸಿ ತಾನು ಮಾಧವಿಯನ್ನು ಮದುವೆಯಾಗಿದ್ದರೂ ಆಕೆ ಯಿಂದ ಸುಖಪಡೆಯುವುದಂತೂ ಸಟೆ. ಆದು ದರಿಂದ ನನ್ನ ದೃಷ್ಟಿಯಲ್ಲಿ ಗುಣಭೂಷಣನ ತ್ಯಾಗವೇ ಹಿರಿದು." ಎಂದು ತಿವಿಕ್ರಮನು ಉತ್ತರಕೊಟ್ಟನು.

ರಾಜನಿಗೆ ಈ ರೀತಿ ಮೌನಭಂಗವಾದ ಕೂಡಲೇ ಬೇತಾಳ ಶವದೊಂದಿಗೆ ಮಾಯ ವಾಗಿ ಮರವನ್ನೇರಿತು.







# ಪ್ರಕೃತಿಯ ಸೋಜಿಗಗಳು

## 3

ಇಲ್ಲಿ ನದಿಯತುಂಬಾ ಕಲ್ಲಿನ ಗುಪ್ಪೆಗಳು ಅಲ್ಲಲ್ಲಿ ಎದ್ದಿದ್ದುವು. ಬಿರುಸಾದ ಪ್ರವಾಹ. ನಾವು ಕಲ್ಲುಗುಪ್ಪೆಗಳ ಮಧ್ಯವನ್ನು ಸೇರಿದೆವು. ಪ್ರವಾಹದ ಒಯಿಲು ನಮ್ಮ ತೆಪ್ಪವನ್ನು ಈಚೆಗೂ ಆಚೆಗೂ ಎಳೆಯುತಿತ್ತು. ಅಡಿಗಡಿಗೂ ಕಲ್ಲುಗಳ ಭಯ.

"ಈಗ ಹುಟ್ಟುಹಾಕಬೇಡ ನ್ಯಿಕುಚಾಪ್!" ಎಂದು ಹುಡುಗ ಕೂಗಿದ.

ನಾನು ಹುಟ್ಟುಹಾಕುವುದನ್ನು ನಿಲ್ಲಿಸಿದೆ. ಈ ತೆಪ್ಪ ಯಾವ ಕ್ಷಣದಲ್ಲಿ ಯಾವ ಬಂಡೆಗೆ ತಾಗಿ ಚೂರಾಗುವುದೋ ಎಂದು ನನಗೆ ಭಯವಾಯಿತು.

ಆದರೆ ಆ ಹುಡುಗ ಅತಿಚಾತುರ್ಯದಿಂದ ಹುಟ್ಟನ್ನುಪಯೋಗಿಸಿ ನಮ್ಮ ತೆಪ್ಪವನ್ನು ದುಮುಕುವ ನೀರೋಟದಿಂದ ತಪ್ಪಿಸಿಬಿಟ್ಟ. ಸುಳಿಗಳು ಅಷ್ಟೇನಿಲ್ಲದ ಪಾಯದೊಳಗೆ ತೆಪ್ಪವನ್ನು ಸೇರಿಸಿದ. ಆದರೂ ಪ್ರವಾಹದ ವೇಗವು ಜೋರುಜೋರಾಗಿತ್ತು. ಒಮ್ಮೆಯಂತೂ ನಮ್ಮ ತೆಪ್ಪ ನೇರಾಗಿ ಒಂದು ಬಂಡೆಗೆ ಢೀಕೊಡಲಿರುವಾಗ, "ಈಗ ಜೋರಾಗಿ ಹುಟ್ಟುಹಾಕು ನ್ಯಿಕುಚಾಪ್!" ಎಂದು ಹುಡುಗ ಕೂಗಿದ. ನದಿಯ ಭಯಂಕರ ಮೊರೆತದಿಂದ ಅವನ ಮಾತು ಕೇಳುವುದೇ ಕಷ್ಟವಾಯಿತು.

ನಾನು ಬಲುವೇಗದಿಂದ ಹುಟ್ಟುಹಾಕಿದೆ. ಕುಮೇವಾವಾನ ಬಲವನ್ನೂ ವೇಗವನ್ನೂ ನೋಡಿ ನನಗೆ ಬಹಳ ಮೆಚ್ಚಿಗೆಯಾಯಿತು. ಆ ಬಂಡೆ ಎರಡು ಗಜ ದೂರದಲ್ಲಿರುವಾಗಲೇ ಆತ ಬಲವಾಗಿ ನೀರನ್ನು ದೂಡಿದನು. ತೆಪ್ಪ ಎಡಗಡೆಗೆ ತಿರುಗಿ ಬಂಡೆಯನ್ನು ಎರಡಡಿ ಅಂತರದಲ್ಲಿ ತಪ್ಪಿಸಿಕೊಂಡು ಮುಂದೆ ಹೋಯಿತು. ಹುಡುಗನು ಚುರುಕುತನವನ್ನೂ ಬುದ್ಧಿಯನ್ನೂ ಉಪಯೋಗಿಸದೇ ಹೋಗಿದ್ದರೆ ನಾವಾ ಬಂಡೆಗೆ ಬಲಿಯಾಗುತಿದ್ದೆವು. ಚಿಕ್ಕತನದಲ್ಲೆ ಅವನು ಗಳಿಸಿದ ಸಾಮರ್ಥ್ಯವು ನನ್ನನ್ನು ದಂಗುಗೊಳಿಸಿತು.

ತಿಬೋರ್ ಸೆಕೆಲ್ಯ





"ನೀರನ್ನೂ, ಅಡವಿಜಂತುಗಳನ್ನೂ ನಾವು ಧೈರ್ಯದ ಸಹಾಯದಿಂದ ವಶಪಡಿಸಿಕೊಳ್ಳ ದಿದ್ದರೆ ಅವೇ ನಮ್ಮನ್ನು ವಶಪಡಿಸಿಕೊಳ್ಳುತ್ತ ವೆಂದು ಮಲೋವಾತಾತ ಹೇಳುತ್ತಾನೆ. ನಮ್ಮ ಈ ಕೆಲಸಕ್ಕೆ ಇದಕ್ಕಿಂತ ಸುಲಭವಾದ ದಾರಿಯಿದ್ದರೂ, ಹೀಗೆ ಬರುವುದರಲ್ಲಿಯೇ ಮಜಾಯಿದೆ. ಓಹೋ ನೋಡು. ಇಲ್ಲಿ ನೀರು ಬಹಳ ಆಳವಾಗಿದೆ. ನಾವೀಗ ಇಲ್ಲಿ ಮೀನು ಹಿಡಿಯುವ" ಎಂದ ಹುಡುಗ.

ಅವನು ಹೇಳಿದ ಪ್ರಕಾರವೇ ನಾನು ತೆಪ್ಪದ ಹಿಂದಿನ ಭಾಗದಲ್ಲಿ ಕುಳಿತುಕೊಂಡು ಅವನ ಸಂಜ್ಞೆಯನ್ನನುಸರಿಸಿ ಬಲಗೈಯಿಂದಲೂ ಎಡಗೈಯಿಂದಲೂ ಮೆಲ್ಲನೆ ಹುಟ್ಟುಹಾಕ ತೊಡಗಿದೆನು. ಅವನು ಬಿಲ್ಲುಬಾಣಗಳನ್ನು ಕೈಯಲ್ಲಿ ಹಿಡಿದು ತೆಪ್ಪದ ಮುಂದು ಭಾಗ ದಲ್ಲಿ ನಿಂತನು. ಅವನ ಶರೀರವು ಕಂಚಿನ ವಿಗ್ರಹದ ಹಾಗೆ ಕಾಣಿಸಿತು. ಅವನ ಹಿಂದಿ ನಿಂದ ಉದಯಕಾಲದ ನೀಲಾಕಾಶ. ಅವನ ಕರ್ರಗಿನ ಜುಟ್ಟು ಭುಜಗಳವರೆಗೂ ತೂಗಾಡು ತ್ತಿವೆ. ಅವನ ಮೂಗಿಗೆ ಅಡ್ಡವಾಗಿ ಒಂದು ದಂಟೆತ್ತು. ಎರಡು ಗಲ್ಲಗಳಲ್ಲಿಯೂ ವಲಯಾ ಕಾರವಾಗಿ ಪಚ್ಚೆ ಕುತ್ತಿದ್ದಾರೆ. ಕರಜಾ ಜಾತಿಯವರಿಗೆಲ್ಲ ಇದೊಂದು ಗುರ್ತು. ಅವನ ತಲೆಯಸುತ್ತೂ ಸಣ್ಣಗಾದೊಂದು ಹಸುರು ಬಣ್ಣದ ಪಟ್ಟೆಯಿದೆ. ಹಿಂದಿನ ಭಾಗದಲ್ಲಿ ಈ ಪಟ್ಟೆಯೊಳಗೆ ಉದ್ದವಾದೊಂದು ಹದ್ದಿನಗರಿ ಯನ್ನು ಸಿಕ್ಕಿಸಲ್ಪಟ್ಟಿದೆ. ಅವನ ದುಸ್ತು

ಮತ್ತೆ ಸ್ವಲ್ಪಹೊತ್ತು ಉಪಾಯವಾಗಿ ತೆಪ್ಪವನ್ನು ನಡೆಸುತ್ತಾ ಝರಿಯನ್ನು ದಾಟಿ ಪ್ರಶಾಂತವಾದ ಪ್ರವಾಹವನ್ನು ಸೇರಿದೆವು. ಪ್ರಯಾಸದಿಂದ ನಮಗಿಬ್ಬರಿಗೂ ಶ್ರಮವಾ ಗಿತ್ತು. ಕುಮೇವಾವಾ ತೆಪ್ಪದ ಮುಂದಿನ ಭಾಗದಲ್ಲಿ ಬಿದ್ದುಕೊಂಡ. ನಾನು ಅವನಿಗಿದಿ ರಾಗಿ ಮಲಗಿಕೊಂಡೆ.

ಆಗ ಅವನ ಮುಖದಲ್ಲಿ ಕಿರುನಗೆ ತಾಂಡ ವಿಸುತಿತ್ತು. ಆಕಾಶದಲ್ಲಿ ತೇಲಾಡುವ ಹತ್ತಿ ಮೋಡಗಳನ್ನು ನೋಡುತ್ತ ಆತ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ. ತೆಪ್ಪ ತೊಂದರೆಯಿಲ್ಲದೆ ಪ್ರವಾಹವನ್ನನುಸರಿಸಿಕೊಂಡು ಅದರಷ್ಟಕ್ಕೇ ಸಾಗುತಿತ್ತು. "ನೀನು ಗಟ್ಟಿಗನಾದುದರಿಂ ದಲೇ ಇಂದು ನಾವು ಬದುಕಿದೆವು" ಎಂದೆ.







ಗಳೆಂದರೆ ಸೊಂಟದಲ್ಲಿರುವ ಒಕ್ಕನೂಲು ಮತ್ತು ಅದರಲ್ಲಿರುವ ಲಂಗೋಟಿ ಇಷ್ಟೇ.

ಅವನು ಹಾಗೇ ನಿಂತು ತೀಕ್ಷ್ಣವಾಗಿ ನೀರ ಕಡೆಗೆ ನೋಡುತ್ತಿದ್ದ. ಇದ್ದಕ್ಕಿದ್ದ ಹಾಗೆ ಒಂದು ಬಾಣ ಹಾರಿಸಿದ. ಅದು ನೀರಿನೊಳಗೆ ಚುಚ್ಚಿಕೊಂಡುಹೋಯಿತು. ಅದು ತೇಲಿಬರುವುದನ್ನೇ ನಾವು ನೋಡುತಿದ್ದೆವು. ಬಾಣದ ಗರಿಗಳು ನೀರಿನಮೇಲೆ ಕಾಣಿಸುತ್ತಲೇ ಹುಡುಗನು ತನ್ನ ಕೈಯಲ್ಲಿದ್ದ ಬಿಲ್ಲಿನ ಕೊನೆಯಿಂದ ಅದನ್ನು ಬಳಿಗೆಳೆದುಕೊಂಡ. ಬಾಣದ ಮೊನೆಗೆ ಎರಡಡಿಯ ಮಿಾನೊಂದು ಸಿಕ್ಕಿಕೊಂಡು ಚಡಪಡಿಸುತಿತ್ತು. ಆ ಮಿಾನನ್ನು ಬಾಣದಿಂದ ಕಿತ್ತು ತೆಪ್ಪದಡಿಯಲ್ಲಿಟ್ಟ.

ಕೆಲಸ ಮುಂದುವರಿಯಿತು. ಮತ್ತೊಂದು ಅರ್ಧಗಂಟೆಯೊಳಗೆ ಅವನು ಮತ್ತೆ ಐದು ಮಿಾನುಗಳನ್ನು ಹೀಗೇ ಹಿಡಿದ. ಅವುಗಳಲ್ಲೆರಡು ಬಹಳದೊಡ್ಡವು. ಹುಡುಗನು ಬಿಲ್ಲಂಬುಗಳನ್ನು ಕೆಳಗೆ ಇಟ್ಟು, ಕೊಂಡಿ ಕೋಲನ್ನು ತೆಗೆದುಕೊಂಡ. ಅದರ ಕೋಲನ್ನೂ ಕಬ್ಬಿಣದ ಕೊಕ್ಕೆಯನ್ನೂ, ತೆಪ್ಪದ ಮುಂದು ಭಾಗದಲ್ಲಿ ಕಟ್ಟಿರುವ ಹಗ್ಗವನ್ನೂ ಶ್ರದ್ಧೆಯಿಂದ ನೋಡುತಿದ್ದ. ಅವನಿಗೇನೋ ದೊಡ್ಡ ಮಿಾನು ಕಾಣುತ್ತಿರುವುದೆಂದು ನಾನು ಗ್ರಹಿಸಿದೆ. ಅವನು ಬಾಗಿ ನಿಂತು ನೋಡುತ್ತಾ, ತೆಪ್ಪವನ್ನು ಬಲಗಡೆಗೆ ನಡೆಸುವಂತೆ ನನಗೆ ಸನ್ನೆಮಾಡಿದ. ಅಕಸ್ಮಾತ್ತಾಗಿ ಅವನು ತನ್ನ ಬಲಗೈಯಲ್ಲಿದ್ದ ಕೊಂಡಿ ಕೋಲನ್ನೆತ್ತಿ ಬಲವಾಗಿ ನೀರಿಗೆ ಬಿಸುಟ. ಅದು ಗುರಿತಪ್ಪಿತೋ ತಗಲಿತೋ ಕೆಲವು ಕ್ಷಣ ನಮಗೊಂದೂ ಗೊತ್ತಾಗಲಿಲ್ಲ. ಕ್ಷಣಗಳೇ ನಮಗೊಂದು ಯುಗದಂತಿದ್ದುವು.

ಕಡೆಗೆ ಕೊಂಡಿಕೋಲಿನ ಮೊನೆ ನೀರಮೇಲೆ ಬಂದು ದೂರದೂರ ಹೋಗುತ್ತಿರುವುದು ಕಂಡಿತು. ಹಗ್ಗವೆಲ್ಲಾ ನೀರಿನೊಂದಿಗೆ ಹೋಗಿ, ಬಳಿಕ ನಮ್ಮ ತೆಪ್ಪವನ್ನೂ ಎಳೆದುಕೊಂಡು ಹೋಗತೊಡಗಿತು. ನೀರಿನಡಿಯಲ್ಲಿರುವ ಪ್ರಾಣಿಯಾವುದೋ ನಮ್ಮ ತೆಪ್ಪವನ್ನು ಎಳೆದುಕೊಂಡು ಹೋಗುತಿತ್ತು. ಅದೊಂದು ದೊಡ್ಡ ಮಿಾನಾಗಿರಬೇಕು. ಏಟು ತಿಂದ ಆವೇಶದಲ್ಲಿ ಅದು ನಮ್ಮ ತೆಪ್ಪವನ್ನು ಈಚೆಗೂ ಆಚೆಗೂ ಎಳೆದುಕೊಂಡು ಹೋಗುತಿತ್ತು. ನಿಂತಿದ್ದರೆ

ತಾನು ಬಿದ್ದು ಹೋದೇನೆಂದುಕೊಂಡು ಕುಮೇವಾವಾ ತೆಪ್ಪದ ಮುಂದು ಭಾಗದಲ್ಲಿ ಮಲಗಿಕೊಂಡ.

ಹತ್ತು ನಿಮಿಷದವರೆಗೆ ಹುಚ್ಚು ವೇಗದಿಂದ ಹೋದಮೇಲೆ ಪೆಟ್ಟು ತಿಂದ ಮೀನಿನ ಸತ್ತು ಕ್ರಮವಾಗಿ ತಗ್ಗಿ ಕಡೆಗೆ ನಿಂತು ಹೋಯಿತು. ಈಗ ನಾವು ಹಗ್ಗವನ್ನು ಎಳೆಯ ತೊಡಗಿದೆವು: ಹಗ್ಗ ಮುಗಿಯುತ್ತಲೇ ಕೊಂಡಿ ಕೋಲೂ, ಅದರಲ್ಲಿ ಸಿಕ್ಕಿಕೊಂಡಿದ್ದ ದೊಡ್ಡ "ಪಿರಾರುಕು" ಮೀನೂ ಕೈಗೆ ಹತ್ತಿದುವು. ಈ ಮೀನಿನ ನೀಳ ಎರಡು ಗಜ. ಎಮೆಜಾನ್ ನದಿಯ ಮೀನುಗಳೊಳಗೆಲ್ಲಾ ಇದೇ ಹೆಚ್ಚು ರುಚಿಯಾದುದು.

ಈ ಮೀನನ್ನು ತೆಪ್ಪದ ಮೇಲೇರಿಸಿ ನಾವು ಶ್ರಮಪರಿಹಾರ ಮಾಡಿಕೊಳ್ಳುತ್ತಿರುವಾಗ, ನಾನು ಆ ಹುಡುಗನ ಸಾಮರ್ಥ್ಯವನ್ನು ಮೆಚ್ಚಿಕೊಂಡೆ. ಆತ ನನ್ನ ಮೆಚ್ಚಿಕೆಯನ್ನು ಲಕ್ಷಿಸದೆ "ಎಲ್ಲಾ ಪ್ರಾಣಿಗಳಿಗೂ ಆಹಾರವನ್ನು ಸಂಪಾದಿಸುವ ವಿದ್ಯೆ ಬರಲೇಬೇಕು. ಮನುಷ್ಯನಿಗೆಕೂಡ" ಎಂದ.

"ಆದರೆ ನೀನು ಬಹಳ ಚಿಕ್ಕವನಾನೆ!" ಎಂದು ನಾನು ಹೇಳಿದೆ.

"ನನ್ನಗಲ್ಲಗಳಲ್ಲಿರುವ ಈ ಪಚ್ಚೆಯ ರೇಖೆಯನ್ನು ನೋಡಿದಿರಾ? ಇದು ನಾನು ದೊಡ್ಡವನೆಂದು ಅರ್ಥ." ಎಂದನವ.

"ಹಾಗೋ! ಅದನ್ನು ಸ್ವಲ್ಪ ವಿವರವಾಗಿ ಹೇಳು ವಾವಾ" ಎಂದೆ.

"ಈಗ ಸಮಯವಲ್ಲ. ನಾವು ಮಾತಾಡಿದರೆ ಮೀನುಗಳು ಓಡಿ ಹೋಗುತ್ತವೆ. ಅಲ್ಲಿ ನಿನ್ನ ಗೆಳೆಯರು ಹಸಿನೆಯಿಂದ ಸಾಯುತ್ತಾರೆ" ಎಂದ.

"ಆದರೂ ಚಿಂತಿಲ್ಲ. ಆ ಪಚ್ಚೆ ಗುರ್ತಿನ ವಿಷಯ ಹೇಳು" ನಾನೆಂದೆ.

"ತಾಳ್ಮೆಯುಳ್ಳವನಿಗೆ ನಿಜ ತಿಳಿಯುತ್ತದೆ ಅಂತ ನಮ್ಮ ಮಲೋವಾ ತಾತ ಹೇಳುತ್ತಾನೆ" ಎಂದನವ. ಮತ್ತೆ ನಾನು ಮಾತಾಡದೆ, ತಾಳ್ಮೆಯುಳ್ಳವನಂತೆ ಕಾಣಲು ಪ್ರಯತ್ನಿಸಿದೆ. ಆದರೆ ಆ ವಿಷಯ ತಿಳಿಯುವ ಕುತೂಹಲ ನನ್ನನ್ನು ಪೀಡಿಸುತ್ತಾ ಇತ್ತು.

[ ಇನ್ನೂ ಇದೆ ]



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1958 ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಅಕ್ಟೋಬರ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ತಗ್ಗಿ ಜಾರಿದರೆ ಭೂಮಾತೆ ತಡವಿಕೊಟ್ಟಾಳು,

ಎರಡನೇ ಫೋಟೋ: ಹಿಗ್ಗಿ ಹಾರಿದರೆ ಭೂಮಾತೆ ಅಪ್ಪಳಿಸಿಯಾಳು!

ಕಳಿಸಿದವರು: ಪಿ. ಶ್ರೀನಿವಾಸರಾವ್,

ತಾಳೀಪಾಡೀಗ್ರಾಮ ಕಿನ್ನಿಗೋಳಿ, ದ. ಕ.

**ಬಹುಮಾನ ರೂ. 10/-ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಚಿತ್ರ ಕಥೆ





ಒಂದು ದಿನ ವಾಸು ಮತ್ತು ಗೋಪಿಯರು 'ಟೈಗರ್' ನೊಂದಿಗೆ ತೋಟಕ್ಕೆ ಹೋದರು. ಬೆಳೆದ ಕಾಯಿಗಳನ್ನೂ ಹಣ್ಣುಗಳನ್ನೂ ಕೊಯಿದು ಬುಟ್ಟಿಗೆ ಹಾಕಿದರು. ಅವರು ಮತ್ತೂ ಹಣ್ಣು ಕೀಳುತ್ತಿರುವಾಗ ಅರ್ಧತುಂಬಿದ ಬುಟ್ಟಿ, ಇಟ್ಟಲ್ಲಿ ಕಾಣದೆ ಹೋಯಿತು. ಸುತ್ತಾ ಹುಡುಕಿದಾಗ ಯಾವುದೋ ಪ್ರಾಣಿಯ ಪಾದದ ಗುರ್ತುಗಳು ಕಂಡುವು. 'ಟೈಗರ್' ಆ ಗುರುತನ್ನು ಹಿಡಿದುಕೊಂಡೇ ಹೋಯಿತು. ಅದಾವ ಪ್ರಾಣಿಯೋ ಎಂದು ಹೆದರುತ್ತ ಹೆದರುತ್ತ ವಾಸು ಗೋಪಿಯರು ಅದರ ಹಿಂದೆಯೇ ಹೋದರು. ಹೀಗೆ ಹೋಗಿ ಒಂದು ತಗ್ಗಿನ ಬದಿಯಲ್ಲಿ ನಿಂತು ಕೆಳಕ್ಕೆ ನೋಡಿದಾಗ ಅವರ ಬುಟ್ಟಿಯಲ್ಲಿದ್ದ ಹಣ್ಣುಗಳನ್ನು ಒಂದು ಕತ್ತೆ ತಿನ್ನುತ್ತಾ, ಗಟ್ಟಿಯಾಗಿ ಕೂಗಿತು!





Printed by B. NAGI REDDI at the B. N. K. Press Private Ltd., and Published by him for Chandamama Publications, from Madras 26.—Controlling Editor: SRI 'CHAKRAPANI'

# ನಿಮ್ಮ ಬಟ್ಟೆಗಳಿಗೆ ಅತ್ಯುತ್ತಮ ಸಾಬೂನೇ ಬೇಕು—

# ಅದೆಂದರೆ ತಾತಾರವರ 501 ಸ್ಪೆಷಲ್ ಸಾಬೂನು

ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿ ನಿಮ್ಮ ಬಟ್ಟೆಗಳಿಗೆ ವಿಶೇಷ ರಕ್ಷಣೆಯನ್ನು ಕೊಡಿರಿ! ಬಟ್ಟೆಗಳನ್ನು ಶುಭ್ರವಾಗಿ, ಹೊಳೆಯುವಂತೆ ಮಾಡುವ ಈ ಸಾಬೂನಿನಿಂದ ಎಂತಹ ನಾಜೂಕು ಬಟ್ಟೆಗಳನ್ನಾದರೂ ಒಗೆಯಬಹುದು. ಯಾವಾಗಲೂ ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿರಿ!




ಹೊಸ ಹಳದಿ ಮತ್ತು ಕೆಂಪು ಬಣ್ಣದ ಹೊದಿಕೆ ಇರುವುದನ್ನು ನೋಡಿ ಕೊಂಡುಕೊಳ್ಳಿರಿ

ತಾತಾ ಆಯಿಲ್ ಮಿಲ್ಸ್ ಕಂಪೆನಿ ಲಿಮಿಟೆಡ್

**ದಿ ತಾತಾ ಆಯಿಲ್ ಮಿಲ್ಸ್ ಕಂಪೆನಿ, ಲಿಮಿಟೆಡ್**

ಸೇಲ್ಸ್ ಆಫೀಸ್: 2, ಮಹಾತ್ಮಾ ಗಾಂಧೀ ರೋಡ್, ಬೆಂಗಳೂರು-1.

Photo by K. K. Nair



ಬಹುಮಾನ
ಪಡೆದ ಶೀರ್ಷಿಕೆ

ಹೀಗ್ಗಿ ಹಾರಿದರೆ ಭೂಮಾತೆ
ಅಪ್ಪಳಿಸಿಯಾಳು!

ಕಳಿಸಿದವರು:
ಪಿ. ಶ್ರೀನಿವಾಸರಾವ್

CHANDAMAMA (Kannada) OCTOBER 1958 Regd. No. M. 5210




ರೂಪಧರನ ಯಾತ್ರೆಗಳು - ೧೫